

ಜಯಚಾಮರಾಜ ವೊಡೆಯರ್.

ಶ್ರೀಮದ್ಯುವರಾಜ ಕುಮಾರರೂ

ಮಠಗಳ ಮುಖ್ಯ ನಾಯಕರೂ

ಆದ

**ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್**

ಅವರ ಸನ್ನಿಧಿಯಲ್ಲಿ

**ಅನುಮತಿ ಪಡೆದು**

ಈ ಗ್ರಂಥವು ಅರ್ಪಿಸಲ್ಪಟ್ಟಿದೆ.

# ಘೋಷಣೆ

ಈಗ ಬಾಲಕರಾಗಿರುವವರು ಮುಂದೆ ನಮ್ಮ ದೇಶದ ಪ್ರಜೆಗಳಾಗ ತಕ್ಕವರು. ಇವರ ಜೀವನವು ಸಾರ್ಥಕವಾಗಬೇಕಾದರೆ, ಇವರು ಸುಖ ವಾಗಿ ಬಾಳುವುದಕ್ಕೂ ಮಾತೃ ಭೂಮಿಗೆ ಕೈಲಾದ ಸೇವೆಯನ್ನು ಮಾಡುವು ದಕ್ಕೂ ಅನುಕೂಲವಾಗುವ ತರಬೇತಿಯನ್ನು ಇವರಿಗೆ ಚಿಕ್ಕಂದಿನಿಂದಲೂ ಕೊಡಬೇಕು. ನಮ್ಮ ಪಾಠಶಾಲೆಗಳಲ್ಲಿ ಕೆಲವು ವಿಷಯಗಳಲ್ಲಿ ಮಾತ್ರ ಶಿಕ್ಷಣವು ಕೊಡಲ್ಪಡುತ್ತಿರುವುದೇ ಹೊರತು, ದಯೆ, ಸತ್ಯ, ಶೀಲ ಸ್ವಭಾ ವಗಳು ನೆಲೆಗೊಳ್ಳುವುದಕ್ಕೂ, ಧೈರ್ಯ ಸ್ಥೈರ್ಯಾದಿ ಗುಣಗಳು ವೃದ್ಧಿ ಯಾಗುವುದಕ್ಕೂ ಪರಿಶುದ್ಧವಾದ ಪ್ರಕೃತಿಯ ಸೌಂದರ್ಯ ಮತ್ತು ಶಕ್ತಿ ಗಳ ಸಮಾಗಮದಿಂದ ಬರುವ ಆರೋಗ್ಯ, ಸುಖ ಸಂಪತ್ತಿಗಳನ್ನು ಪಡೆಯುವುದಕ್ಕೂ ಬೇಕಾದ ಏರ್ಪಾಡುಗಳು ಇರುವುದಿಲ್ಲ.

ಮಕ್ಕಳ ಮನಸ್ಸು ಮತ್ತು ಹೃದಯಗಳು ಸಾಗುವಳಿಯಾಗದ ಹೊಸ ಜಮೀನಿನಂತೆ ಇರುತ್ತವೆ. ಇವುಗಳನ್ನು ಸಕಾಲದಲ್ಲಿ ಸರಿಯಾಗಿ ಕೃಷಿ ಮಾಡಿ, ಒಳ್ಳೆಯ ಸ್ವಭಾವ ಮತ್ತು ಸದ್ಗುಣಗಳ ಬೀಜಗಳನ್ನು ಬಿತ್ತಿ, ಬಹು ಬೆಲೆಯುಳ್ಳ ಪೈರನ್ನೂ, ಫಲಪುಷ್ಪಾದಿಗಳನ್ನೂ ಬೆಳೆಯಿಸಿ, ಇವರು ಯೋಗ್ಯರಾದ ಪ್ರಜೆಗಳಾಗುವಂತೆ ಮಾಡಲು ಪ್ರಯತ್ನಿಸಬೇಕು. ಈ ಸದುದ್ದೇಶವನ್ನು ನಮ್ಮ ಬಾಲಕರಿಗೆ "ಕಬ್" ಶಿಕ್ಷಣವನ್ನು ಕೊಡು ವುದರ ಮೂಲಕ ನೆರವೇರಿಸಬಹುದು. ಆದರೆ ಈ ಕಾರ್ಯವನ್ನು ಕೈ ಕೊಳ್ಳುವುದಕ್ಕೆ ಸಹಾಯಕರವಾದ ಯಾವ ಪುಸ್ತಕವೂ ಕನ್ನಡ ಭಾಷೆಯಲ್ಲಿ ಇದುವರಿವಿಗೂ ಇರಲಿಲ್ಲ. ಹೀಗಿರುವಲ್ಲಿ ಶ್ರೀಯುತ ಕಶ್ಯಪರು ಬಹಳ ಶ್ರಮಪಟ್ಟು ಈ ಪುಸ್ತಕವನ್ನು ರಚಿಸಿರುವುದು ನಮ್ಮ ಬಾಲಕರ ಭಾಗ್ಯವೇ ಸರಿ.

ದೇವರಲ್ಲಿಯೂ, ಗುರುಹಿರಿಯರಲ್ಲಿ ಭಕ್ತಿಯೂ, ಒಡನಾಡಿಗಳಲ್ಲಿ ಪ್ರೀತಿಯೂ, ಪಶುಪಕ್ಷಿಗಳಲ್ಲಿ ಕನಿಕರಯುಕ್ತವಾದ ಪ್ರೇಮವು ಬಾಲಕರಲ್ಲಿ ವೃದ್ಧಿಯಾಗುವಂತೆಯೂ, ಧೈರ್ಯ ಸಾಹಸ ಉತ್ಸಾಹಾದಿಗಳು ನೆಲೆಗೊಳ್ಳುವಂತೆಯೂ, ವಿಧವಿಧವಾದ ಆಟ, ಪಾಟ, ಕುಣಿತ, ಕಥೆ, ಹಾಡು, ಘರ್ಜನೆ ಮುಂತಾದುವುಗಳನ್ನು ಶ್ರೀ ಕಶ್ಯಪರು ಸುಲಭ ಶೈಲಿಯಲ್ಲಿ ಬರೆದಿರುವುದಲ್ಲದೆ, ಅತಿ ವಿತರಣೆಯಿಂದ ಆರಿಸಿ ಸೇರಿಸಿರುವರು.

ನಮ್ಮ ಮಾತೃಭೂಮಿಗೆ ಇದೊಂದು ಸೇವೆಯೆಂದು ಭಾವಿಸಿ, ಇವರು ಈ ಗ್ರಂಥವನ್ನು ಬರೆದಿರುವುದರಿಂದ; ಇದು ನಮ್ಮ ಕರ್ಣಾಟಕ ದೇಶದಲ್ಲಿ ಎಲ್ಲಾ ಕಡೆಗಳಲ್ಲಿಯೂ ಪ್ರಚಾರವಾಗಿ, ಬಾಲಕರೆಲ್ಲರೂ ಅದರ ಪ್ರಯೋಜನವನ್ನು ಹೊಂದಿ, ತನ್ಮೂಲಕ ಶ್ರೀ ಕಶ್ಯಪರ ಸದುದ್ದೇಶವು ಸಫಲವಾಗಲೆಂದು ಹಾರೈಸುತ್ತೇನೆ.



# ನನ್ನ ಕೂಗು

ಸ್ಕೌಟು ಕ್ರಮಾಚರಣೆಯು ನಮ್ಮ ಮೈಸೂರು ಸಂಸ್ಥಾನದಲ್ಲಿ ಪ್ರಾರಂಭವಾಗಿ ಹದಿಮೂರು ವರ್ಷಗಳಾದವು. ಇಷ್ಟು ವರ್ಷಗಳಿಂದಲೂ ಇದು ಹುಡುಗರಿಗೆ ಬಹಳ ಉಪಕಾರಿಯಾಗಿದೆಯೆಂದು ಒತ್ತಿ ಹೇಳಬೇಕಾಗಿಲ್ಲ. ಹುಡುಗರು ಶಿಕ್ಷಣ ಪಡೆದು ಸ್ವಾವಲಂಬಿಗಳಾಗಿಯೂ, ಪರೋಪಕಾರ ಶೀಲರಾಗಿಯೂ ಏರ್ಪಟ್ಟಿರುವುದರ ಫಲವನ್ನು ನಾವು ಆಗಿಂದಾಗ ನೋಡುತ್ತಲೇ ಇರುವೆವು.

ಈ ಸ್ಕೌಟು ಕ್ರಮಾಚರಣೆಗೆ ಅಸ್ತಿಭಾರವಾದ 'ಕಬ್' ಅಂದರೆ ಮರಿಗಳ ಕ್ರಮಾಚರಣೆಯೂ ನಮ್ಮ ಸಂಸ್ಥಾನದಲ್ಲಿ ಏರ್ಪಟ್ಟಿದೆ. ಆದರೆ ಇದು ಇನ್ನೂ ಹೆಚ್ಚು ಪ್ರವೃದ್ಧಮಾನಕ್ಕೆ ಬಂದಿಲ್ಲವೆಂದು ಸಂಕಟದಿಂದ ಹೇಳಬೇಕಾಗಿದೆ. ಇದಕ್ಕೆ ಕಾರಣಗಳೂ ಬಲವಾಗಿಯೇ ಇವೆ.

ಮರಿಗಳ ಶಿಕ್ಷಣವು ಸಾಮಾನ್ಯವಾಗಿ ಪ್ರಾಥಮಿಕ ಶಾಲೆಗಳಲ್ಲಿ ಓದುವ ವಯಸ್ಸಿನ ಹುಡುಗರಿಗಾಗಿ ಏರ್ಪಟ್ಟಿರುವುದು. ನಮ್ಮ ಪ್ರಾಥಮಿಕ ಶಾಲೆಗಳಲ್ಲಿರುವ ಅನೇಕ ಉಪಾಧ್ಯಾಯರುಗಳಿಗೆ ಆಂಗ್ಲಭಾಷಾ ಜ್ಞಾನವು ಅಷ್ಟಿರುವುದಿಲ್ಲ. ಅಲ್ಲದೆ ಆ ವಯಸ್ಸಿನ ಹುಡುಗರಿಗೆ ಈ ವಿಷಯಗಳನ್ನು ಪರಭಾಷೆಯಲ್ಲಿ ತಿಳಿಸುವುದೂ ಅಸಾಧ್ಯವೇ! ಈ ಸಂದರ್ಭದಲ್ಲಿ ಹಿರಿಯಣ್ಣಂದಿರಿಗೆ ಉಪಯೋಗವಾಗುವ ಒಂದು ಕನ್ನಡ ಪುಸ್ತಕದ ಅವಶ್ಯಕತೆಯು ಬಹು ದಿನಗಳಿಂದಲೂ ಇತ್ತು. ಆದುದರಿಂದಲೇ ನಾನು ಈ ಪುಸ್ತಕವನ್ನು ಸಂತೆಯ ಹೊತ್ತಿಗೆ ಮೂರು ಮೊಳವನ್ನು ನೇಯ್ದಂತೆ ನೇಯ್ದಿರುವುದು.

ಸ್ಕೌಟು ಅಥವಾ ಮರಿಗಳ ಶಿಕ್ಷಣ ಕ್ರಮವನ್ನು ಪುಸ್ತಕಗಳಿಂದ ಕಲಿಯುವುದು ಸಾಧ್ಯವಲ್ಲ; ಶಿಕ್ಷಣ ಶಿಬಿರಗಳಲ್ಲೇ ಕಲಿಯಬೇಕು. ಆದರೆ ಅಲ್ಲಿ ಕಲಿತ ವಿಷಯಗಳನ್ನು ನೆನಪು ಮಾಡಿಕೊಡಲು ಪುಸ್ತಕಗಳು ಅವಶ್ಯ. ಈ ಅವಶ್ಯಕತೆಗಾಗಿಯೇ ಈ ಪುಸ್ತಕವು ಹೊರಬಿದ್ದಿರುವುದು. ಸ್ವಲ್ಪವಾದರೂ ಗುಣವಿದ್ದು ಮರಿಗಳ ಶಿಕ್ಷಣವು ಹರಡಲು ಈ ಪುಸ್ತಕವು ಉಪಯುಕ್ತವಾದರೆ ತಾನು ಕೈಗೊಂಡ ಕಾರ್ಯವು ಸಫಲವಾಯಿತೆಂದು ಲೇಖಕನು ಹಿಗ್ಗುವನು.

ಈ ಪುಸ್ತವಕನ್ನು ಬರೆಯುವುದರಲ್ಲಿ ಅನೇಕ ಮಹನೀಯರುಗಳು ಅನೇಕ ವಿಧಗಳಲ್ಲಿ ನನಗೆ ಸಹಾಯಮಾಡಿರುತ್ತಾರೆ. ಅವರಿಗೂ, ಮತ್ತು ತಮ್ಮ ಕಥೆ, ಹಾಡು ಅಥವಾ ಹರ್ಷನಾದಗಳನ್ನು ಈ ಪುಸ್ತಕದಲ್ಲಿ ಉಪ ಯೋಗಿಸಿಕೊಳ್ಳಲು ಅನುಮತಿಯನ್ನಿತ್ತ ಆಯಾ ಬರಹಗಾರರಿಗೂ, ತಮ್ಮ ಪತ್ರಿಕೆಯಾದ "ಮಕ್ಕಳ ಪುಸ್ತಕ" ದಲ್ಲಿ ಆಗಾಗ್ಗೆ ಪ್ರಕಟವಾಗಿದ್ದ ಕೆಲವು ಕಥೆ ಮತ್ತು ಹಾಡುಗಳನ್ನು ಇಲ್ಲಿ ಮುದ್ರಿಸಲು ಒಪ್ಪಿದ ಕೃಷ್ಣಾ ಕಂಪೆನಿ ಯವರಿಗೂ, ಈ ಪುಸ್ತಕವನ್ನು ಬರೆಯುವುದರಲ್ಲಿ ನನಗೆ ಬೆಂಬಲವಾಗಿದ್ದ "ಮೈಸೂರು ಮಕ್ಕಳು" ಮಾಸ ಪತ್ರಿಕೆಗೂ, "ಸ್ಕೌಟುಗಳ ಕನ್ನಡ ಕೈಪಿಡಿ" ಮತ್ತು "ಸ್ಕೌಟು ಗೀತೆಗಳು" ಇಂದ ಕೆಲವು ವಿಷಯ ಮತ್ತು ಹಾಡುಗಳನ್ನು ಇಲ್ಲಿ ಸೇರಿಸಲು ಸಮ್ಮತಿಸಿದ ಹೆಡ್‌ಕ್ವಾರ್ಟರ್ಸ್ ಕಾರ್ಯ ನಿರ್ವಾಹಕ ಸಮಿತಿಯ ಕಾರ್ಯದರ್ಶಿಗಳಿಗೂ, ಕೆಲವು ಚಿತ್ರಗಳನ್ನು ಬರೆದು ಕೊಟ್ಟ ನನ್ನ ಮಿತ್ರರಾದ ಶ್ರೀಯುತ ಜಿ. ಶ್ರೀನಿವಾಸರಾವ್, ಬಿ.ಎ., ಬಿ.ಎಲ್., ರವರಿಗೂ, ಇಲ್ಲಿ ಅಚ್ಚಾಗಿರುವ ಅನೇಕ ಪಡಿಯಚ್ಚುಗಳನ್ನು ಉದಾರ ಮನಸ್ಸಿನಿಂದ ಕೊಟ್ಟ "ಮೈಸೂರು ಸ್ಕೌಟ್" ಮಾಸ ಪತ್ರಿಕೆಯ ಸಂಪಾದಕರಿಗೂ ನಾನು ಎಷ್ಟು ಕೃತಜ್ಞನಾಗಿದ್ದರೂ ಸಾಲದು.

ಕೇಳಿದಕೂಡಲೆ ಒಪ್ಪಿಕೊಂಡು, ಈ "ಘರ್ಜನೆ"ಗಳನ್ನು ಬರೆದು ಕೊಟ್ಟ ಪೂಜ್ಯರಾದ, ಶ್ರೀಮರ್‌|| ಕೆ. ಶಂಕರನಾರಾಯಣರಾವ್, ಎಂ.ಎ., ಬಿ.ಎಲ್., ಸಿ. ಸುಬ್ಬರಾವ್, ಎಂ.ಎ., (ಆನರ್ಸ್), ಸಿ. ಕೆ. ವೆಂಕಟ ರಾಮಯ್ಯ, ಎಂ.ಎ., ಎಲ್‌ಎಲ್.ಬಿ., ಎ. ವಾಸುದೇವರಾವ್, ಬಿ. ಎ., ಮತ್ತು ಎಸ್. ವಿ. ರಂಗಣ್ಣ, ಎಂ.ಎ., ಯವರು ನನಗೆ ಮಹೋಪಕಾರ ಮಾಡಿದ್ದಾರೆ.

ಒಟ್ಟಿನಲ್ಲಿ ಈ ಪುಸ್ತಕವು ಈರೀತಿ ಹೊರಬೀಳಲು ನನಗೆ ನಾನಾ ರೀತಿಗಳಿಂದ ಸಹಾಯಮಾಡಿದ ಮಹನೀಯರುಗಳೆಲ್ಲರಿಗೂ ನನ್ನ ಹೃತ್ಪೂ ರ್ವಕವಾದ ನಮಸ್ಕಾರಗಳನ್ನು ಮಾಡಿ ಲೇಖಣಿಯನ್ನು ಕೆಳಗಿಡುವೆನು.



# ಮರಿಗಳ ಕೂಗು

ಪುಟ





# ಮುಖ್ಯ ಚಿತ್ರಗಳು

೧. ಮರಿಗಳ ಮುಖ್ಯ ನಾಯಕರು : ಶ್ರೀ ಜಯಚಾಮರಾಜ ಒಡೆಯರ್.

೨. ಬೇಡನ್ ಪೊವೆಲ್‌ರವರೂ, ಅವರ ಕುಟುಂಬವೂ.

೩. ಮರಿಗಳ ವೀರ ಘರ್ಜನೆ.

೪. ಶ್ರೀಮದ್ಯುವರಾಜರು ಅವರ ಕುಮಾರನಿಗೂ ಆತನ ಗೆಳೆಯರಿಗೂ ಮರಿಗಳ ದೀಕ್ಷೆಯನ್ನು ಕೊಡುತ್ತಿರುವುದು.

೫. ಶ್ರೀ ಜಯಚಾಮರಾಜ ಒಡೆಯರು ಅವರ ಸಹೋದರಿಯರು ಮರಿಗಳ ಆಟಗಳನ್ನು ನೋಡುತ್ತಿರುವುದು.



# ಮರಿಗಳ ಕೂಗು



## ಮೈಸೂರು ಬಾಯ್ ಸ್ಕೌಟ್ ಮಂಡಲಿ




## ನಿಬಂಧನೆಗಳು

---

### ಸಾಮಾನ್ಯ ನಿರ್ಣಯಗಳು

**ಉದ್ದಿಶ್ಯ**

ಹುಡುಗರು ಮುಂದೆ ಸತ್ಪ್ರಜೆಗಳಾಗಿ ಪರಿಣಮಿಸುವಂತೆ ಅವರಿಗೆ ತಕ್ಕ ಶಿಕ್ಷಣವನ್ನು ಕೊಡಬೇಕೆಂಬುದೇ ಈ ಮಂಡಲಿಯ ಉದ್ದೇಶವು. ವಿಷಯಗಳನ್ನು ಗ್ರಹಿಸುವುದು, ವಿನಯ ವಿಧೇಯತ್ವಾದಿ ಸಲ್ಲಕ್ಷಣಗಳನ್ನು ಪಡೆಯುವುದು, ಆತ್ಮಾವಲಂಬನೆಯನ್ನು ಬೆಳೆಸಿಕೊಳ್ಳುವುದು, ರಾಜಭಕ್ತಿ, ಭೂತದಯೆ ಪಶ್ಚಾತ್ತಾಪ, ಪರರಿಗೆ ಉಪಕಾರವಾಗತಕ್ಕ ವಿದ್ಯೆ, ತಮಗೆ ಉಪಯೋಗವಾಗತಕ್ಕ ಕೈ ಕೆಲಸ, ದೇಹಾರೋಗ್ಯ, ದೇಹಶಕ್ತಿ, ಇವುಗಳೆಲ್ಲಾ ಈ ಶಿಕ್ಷಣದಿಂದ ದೊರೆಯುವ ಫಲಗಳು. ಒಟ್ಟಿನಲ್ಲಿ ಈ ಶಿಕ್ಷಣದಿಂದ

ಹುಡುಗರ ಶೀಲಸ್ವಭಾವಾದಿಗಳು ಚೆನ್ನಾಗಿ ಬೆಳೆದು ಅವರು ದೇಹದಲ್ಲಿ ಶಕ್ತಿವಂತರಾಗಿಯೂ, ಬುದ್ಧಿಯಲ್ಲಿ ಸೂಕ್ಷ್ಮವಂತರಾಗಿಯೂ, ನೀತಿಯಲ್ಲಿ ಗಣ್ಯರಾಗಿಯೂ ಪ್ರಕಾಶಿಸುತ್ತಾರೆ.

## ಸದಸ್ಯತೆ

ಈ ಮಂಡಲಿಗೆ ಸದಸ್ಯರಾಗತಕ್ಕವರು ಸ್ಕೌಟು ಅಥವಾ ಮರಿಗಳ ಭಾಷೆಯನ್ನು ಕೊಡುವವರಾಗಿಯೂ ಮತ್ತು ಅದರಂತೆ ನಡೆಯುವವರಾಗಿಯೂ ಇರಬೇಕು; ಸರ್ (ಈಗ ಲಾರ್ಡ್) ರಾಬರ್ಟ್ ಬೇಡನ್ ಪವಲ್ ರವರಿಂದ ರಚಿತವಾಗಿರುವ Scout or Cub Hand-books ಅನ್ನು ಅನುಸರಿಸಿ ಶಿಕ್ಷಣವನ್ನು ಕೊಡುವವರಾಗಬೇಕು; ಮತ್ತು ಹೆಡ್ ಕ್ವಾರ್ಟರ್ಸ್ ಕೌನ್ಸಿಲ್ಲಿನಿಂದ ನಿಯಮಿತವಾಗುವ ಪ್ರಕಟನೆಗಳನ್ನೂ, ನಿಬಂಧನೆಗಳನ್ನೂ ಅಂಗೀಕರಿಸಬೇಕು.

ಮೇಲೆ ಹೇಳಿದ ನಿಯಮಗಳಿಗೊಡಂಬಟ್ಟು ಈ ಬಾಯ್ ಸ್ಕೌಟ್ ಮಂಡಲಿಯ ಸದಸ್ಯತ್ವವನ್ನು ಮೈಸೂರು ಸಂಸ್ಥಾನದ ಎಲ್ಲಾ ವರ್ಗದ ಹುಡುಗರೂ ಪಡೆಯಬಹುದು. ಶಾಲೆ, ಕ್ಲಬ್ಬು, ದೇವಸ್ಥಾನ, ಚರ್ಚು ಮೊದಲಾದವುಗಳಿಗೆ ಸಂಬಂಧಿಸಿದಂತೆ ಸ್ಕೌಟುದಳ ಅಥವಾ ಮರಿಗಳ ಗುಂಪುಗಳನ್ನು ಏರ್ಪಡಿಸಬೇಕಾದರೆ ಸ್ಥಳಿಕ ಸ್ಕೌಟು ಸಂಘಗಳಿಲ್ಲದ ಕಡೆಗಳಲ್ಲಿ ಮೊಟ್ಟಮೊದಲು ಹೆಡ್ ಕ್ವಾರ್ಟರ್ಸ್‌ನಿಂದ ಅಪ್ಪಣೆಯನ್ನು ಪಡೆಯಬೇಕು. ನಂತರ ದಳ ಅಥವಾ ಗುಂಪಿಗೆ ಬೇಕಾದ ಅಧಿಕಾರಿಗಳನ್ನು ನೇಮಕಮಾಡಿಕೊಳ್ಳಬಹುದು.

ಸ್ವದೇಶದಲ್ಲಿ ಶಾಂತಿಯನ್ನೂ ಜನಾಂಗಗಳಲ್ಲಿ ಪರಸ್ಪರ ಸೌಹಾರ್ದವನ್ನೂ ಬೆಳೆಸಬೇಕೆಂಬುದೇ ಈ ಮಂಡಲಿಯ ಉತ್ಕಟವಾದ ಆಕಾಂಕ್ಷೆ. ಇಂಡಿಯಾ ಮತ್ತು ಹೊರದೇಶಗಳಲ್ಲಿರುವ ಸ್ಕೌಟು ಮಂಡಲಿಗಳೊಡನೆ ಪತ್ರ

ವ್ಯವಹಾರ ಬೆಳೆಸುವುದು, ಅಭಿಪ್ರಾಯಗಳನ್ನು ಬದಲಾಯಿಸಿಕೊಳ್ಳುವುದು,



ಅವರಲ್ಲಿಗೆ ಹೋಗಿ ಬರುವುದು, ಅವರನ್ನು ಇಲ್ಲಿಗೆ ಕರೆಸಿಕೊಳ್ಳುವುದು— ಇವೇ ಮಂಡಲಿಯ ಆಕಾಂಕ್ಷೆಯನ್ನು ಈಡೇರಿಸಿಕೊಳ್ಳುವ ಮಾರ್ಗಗಳು.

ಸ್ಕೌಟುಗಳ ನಾಲ್ಕನೆಯ ನಿಯಮಕ್ಕನುಸಾರವಾಗಿ ಇಂಡಿಯಾ ದೇಶದಲ್ಲಿರುವ ಇತರ ಸ್ಕೌಟು ಮಂಡಲಿಗಳೊಡನೆ ಮೈತ್ರಿಯನ್ನು ಬೆಳಸಿ, ಸ್ಥಿರಗೊಳಿಸಬೇಕೆಂದು ಈ ಮಂಡಲಿಗೆ ಅಭಿಲಾಷ ಇದೆ.

**ಜಾತಿ**

ಈ ಮಂಡಲಿಯು ಜಾತಿ, ರಾಜಕೀಯ ಮತ್ತು ಸೈನ್ಯಕ್ಕೆ ಸಂಬಂಧಪಟ್ಟಿಲ್ಲ.

(ಅ) ಈ ಮಂಡಲಿಯು ಜಾತಿ ಮತಾಚಾರಗಳ ಗೊಡವೆಗೆ ಹೋಗುವುದಿಲ್ಲ. ಪ್ರತಿಯೊಬ್ಬ ರೋವರ್, ಸ್ಕೌಟು ಮತ್ತು ಮರಿಯು ತಮ್ಮ ತಮ್ಮ ಜಾತಿ, ಮತಾಚಾರಗಳಿಗನುಸಾರವಾಗಿ ಆಚಾರ ವ್ಯವಹಾರಗಳನ್ನಿಟ್ಟುಕೊಂಡು ಪ್ರತಿನಿತ್ಯವೂ ಅದರಂತೆ ನಡೆದುಕೊಳ್ಳುವುದಕ್ಕೂ, ಇತರರ ಜಾತಿ, ಮತಾಚಾರಗಳನ್ನು ಗೌರವಿಸುವುದಕ್ಕೂ ಈಮಂಡಲಿಯು ಪ್ರೋತ್ಸಾಹಿಸುವುದು.

(ಆ) ಈ ಮಂಡಲಿಯು ರಾಜಕೀಯವಲ್ಲ. ಇದು ಯಾವ ರಾಜಕೀಯ ಚಳುವಳಿಗೂ ಸಂಬಂಧಪಟ್ಟಿಲ್ಲ. ರೋವರ್, ಸ್ಕೌಟು ಮತ್ತು ಮರಿಗಳಾಗಲಿ ಅಥವಾ ರೋವರ್, ಸ್ಕೌಟು ಮತ್ತು ಮರಿಗಳ ಅಧಿಕಾರಿಗಳಾಗಲಿ ರಾಜಕೀಯ ವಿಚಾರಗಳಿಗೆ ಸಂಬಂಧಪಟ್ಟ ಸಭೆಗಳಿಗಾಗಲಿ ಅಥವಾ ಸೋಟಗಳಿಗಾಗಲಿ ಸಮರೂಪವನ್ನು ಹಾಕಿಕೊಂಡು ಹೋಗಕೂಡದು. ಅದರಲ್ಲಿ ಭಾಗವನ್ನು ತೆಗೆದುಕೊಳ್ಳಲೂ ಬಾರದು.

(ಇ) ಈ ಮಂಡಲಿಯು ಸೈನ್ಯಕವಲ್ಲ. ಇದು ಯಾವ ಸೈನ್ಯಕ್ಕೆ ಸಂಬಂಧಪಟ್ಟ ಚಳುವಳಿಗೂ ಸೇರಿಲ್ಲ.

## ಹಣ

ಸ್ಕೌಟು ಮಂಡಲಿಯ ಮುಖ್ಯಾಶಯವೇನೆಂದರೆ :—ರೋವರ್, ಸ್ಕೌಟು ಅಥವಾ ಮರಿಗಳು ಸ್ವಪ್ರಯೋಜನಕ್ಕೇ ಆಗಲಿ ಅಥವಾ ದಾನವೇ ಮೊದಲಾದ ಯಾವ ಕಾರಣಕ್ಕೇ ಆಗಲಿ ಎಂದಿಗೂ ಹಣವನ್ನು ಬಿಕ್ಷವೆತ್ತ ಕೂಡದು.

## ದಳದ ಹಣ

ರೋವರ್ ನಾಯಕ, ಸ್ಕೌಟು ದಳಪತಿ ಮತ್ತು ಮರಿಗಳ ಹಿರಿಯಣ್ಣಂದಿರು ತಮ್ಮತಮ್ಮ ದಳ ಅಥವಾ ಗುಂಪುಗಳ ಹಣದ ಲೆಕ್ಕಾಚಾರಗಳನ್ನು ಪ್ರಕಟಿಸಬೇಕು. ಹುಡುಗರ ಹಣವು ಈ ಲೆಕ್ಕಾಚಾರಗಳಲ್ಲಿ ಸೇರಿದ್ದರಂತೂ ಅವುಗಳನ್ನು ಅಜಮಾಯಿಷಿಮಾಡುವ ಅಧಿಕಾರವು ಅವರಿಗೆ ಇದ್ದೇ ಇರುತ್ತದೆ. ರೋವರ್ ನಾಯಕ, ಸ್ಕೌಟು ದಳಪತಿ ಮತ್ತು ಮರಿಗಳ ಹಿರಿಯಣ್ಣಂದಿರು ಲೆಕ್ಕಾಚಾರಗಳನ್ನು ತಮ ತಮಗೆ ತೋರಿದಂತೆ ವಿಧವಿಧವಾಗಿ ಮಾಡುವ ಬದಲು ಒಂದೇ ರೀತಿಯ ಲೆಕ್ಕ ಪಟ್ಟಿಯನ್ನು ಅನುಸರಿಸಿಡುವುದು

ಒಳ್ಳೆಯದು. ಇದೂ ಅಲ್ಲದೆ ವರ್ಷಕ್ಕೊಮ್ಮೆ ತಮ್ಮ ಜಮಾಖರ್ಚುಗಳನ್ನು ಸ್ಥಳಿಕ ಸ್ಕೌಟು ಸಂಘದವರಿಂದ ತಾವಾಗಿಯೇ ತನಿಖೆ ಮಾಡಿಸಿಟ್ಟು ಕೊಳ್ಳಬೇಕು.

ದಳ ಅಥವಾ ಗುಂಪುಗಳಿಗಾಗಿ ಯಾರಾದರೂ ಹಣವನ್ನು ಕೊಟ್ಟರೆ ಅದರ ಲೆಖ್ಖಾಚಾರಗಳನ್ನು ರೋವರ್ ನಾಯಕ, ದಳಪತಿ ಅಥವಾ ಹಿರಿಯಣ್ಣಂದಿರು ತಾವೇ ಒಂಟಿಯಾಗಿ ವಹಿಸುವುದಕ್ಕಿಂತ ಅದನ್ನು ದಳ ಅಥವಾ ಗುಂಪಿನ ಸಮಿತಿಗಳಿಗೆ ವಹಿಸುವುದು ಉತ್ತಮ.

ಒಂದು ದಳ ಅಥವಾ ಗುಂಪು ತನ್ನ ರೋವರ್, ಸ್ಕೌಟು ಅಥವಾ ಮರಿಗಳಿಂದ ಸ್ವಲ್ಪ ಸಹಾಯ ದ್ರವ್ಯವನ್ನು ತೆಗೆದುಕೊಳ್ಳಬೇಕಾಗುವುದು.

## ಸ್ಥಳಿಕ ಸ್ಕೌಟು ಸಂಘದ ಹಣ

ಸಂಘದ ಆಡಳಿತದ ಖರ್ಚಿಗೂ ಮತ್ತು ಸಂಘಕ್ಕೆ ಸೇರಿದ ದಳ ಮತ್ತು ಗುಂಪುಗಳಿಗೆ ಸಹಾಯ ಮಾಡುವುದಕ್ಕೂ ಸಂಘದವರು ಅಲ್ಲಿನ ಪ್ರಮುಖ ಜನರಿಂದ ಹಣವನ್ನು ದೊರಕಿಸಿಕೊಳ್ಳಬೇಕು. ಇದಕ್ಕಾಗಿ ಕೊಡುವ ಹಣವನ್ನು ಯಾವನಾದರೊಬ್ಬ ರೋವರ್ ನಾಯಕ, ದಳಪತಿ ಅಥವಾ ಹಿರಿಯಣ್ಣನ ವಶಕ್ಕೆ ಕೊಡುವ ಬದಲು ಸಂಘದ ಕೋಶಾಧ್ಯಕ್ಷನ ವಶಕ್ಕೆ ಕೊಡುವುದು ಲೇಸು.

ಒಂದು ಸಂಘವು ತನಗೆ ಸೇರಿದ ಪ್ರತಿಯೊಂದು ದಳ ಮತ್ತು ಗುಂಪಿನಿಂದ ಸ್ವಲ್ಪ ಪ್ರವೇಶಧನವನ್ನೂ, ಮತ್ತು ಸಂಘದ ಸದಸ್ಯರುಗಳಿಂದ ಸಹಾಯ ದ್ರವ್ಯವನ್ನೂ ತೆಗೆದುಕೊಳ್ಳಬೇಕಾಗುವುದು.



# ರಚನೆ

## ನಕ್ಷೆ

ಮೈಸೂರು ಸಂಸ್ಥಾನದ ಸ್ಕೌಟು ಮಂಡಲಿಯ ರಚನೆಯನ್ನು ಒಂದು ನಕ್ಷೆಯ ಮೂಲಕ ಸುಲಭವಾಗಿ ತಿಳಿಯಬಹುದು. ಈ ರಚನೆಯನ್ನು ನೋಡಿದರೆ ಮುಖ್ಯವಾಗಿ ಡಿಸ್ಟ್ರಿಕ್ಟ್ ಸ್ಕೌಟು ಕೌನ್ಸಿಲ್ಲುಗಳಿಗೂ, ಸ್ಥಳಿಕ ಸ್ಕೌಟು ಸಂಘಗಳಿಗೂ ಹೆಚ್ಚಿನ ಅಧಿಕಾರವನ್ನು ಕೊಡಲ್ಪಟ್ಟಿರುವುದು ಕಂಡುಬರುತ್ತದೆ. ಕೆಲಸಕಾರ್ಯಗಳ ವಿಚಾರದಲ್ಲಿ ರೋವರ್ ನಾಯಕ, ದಳಪತಿ ಮತ್ತು ಹಿರಿಯಣ್ಣಂದಿರಿಗೂ, ಡಿಸ್ಟ್ರಿಕ್ಟ್ ಸ್ಕೌಟು ಕಮೀಷನರುಗಳಿಗೂ, ಅಲ್ಲಿಂದ ಹೆಡ್‌ಕ್ವಾರ್ಟರ್ಸ್‌ಗೂ ಹೇಗೆ ಸೀದಾ ಸಂಬಂಧವಿರುವುದೆಂಬುದೂ ಗೊತ್ತಾಗುತ್ತದೆ.

**ಪೋಷಕರು**

**ಹೆಡ್‌ಕ್ವಾರ್ಟರ್ಸ್**

**ಮುಖ್ಯ ಸ್ಕೌಟುಗಳು ಮತ್ತು ಕೌನ್ಸಿಲ್**

ಜೊತೆಗೆ

**ಕಾರ್ಯನಿರ್ವಾಹಕ ಸಮಿತಿ**

ಡಿಸ್ಟ್ರಿಕ್ಟ್ ಸ್ಕೌಟು ಕಮೀಷನರುಗಳು

ಜೊತೆಗೆ

ಡಿಸ್ಟ್ರಿಕ್ಟ್ ಸ್ಕೌಟು ಕೌನ್ಸಿಲ್ಲುಗಳು



# ಸ್ಟೇಟ್ ಸ್ಕೌಟ್ (ಹೆಡ್‌ಕ್ವಾರ್ಟರ್ಸ್) ಕೌನ್ಸಿಲ್

## ಮೈಸೂರು ಸಂಸ್ಥಾನದ ಶ್ರೀಮನ್ಮಹಾರಾಜರವರು

### ನಮ್ಮ ಪೋಷಕರು.



ಸರ್ ಶ್ರೀ ಕೃಷ್ಣರಾಜ ಒಡೆಯರ್ ಬಹದ್ದೂರ್, ಜಿ. ಸಿ. ಎಸ್. ಐ., ಜಿ. ಬಿ. ಇ.

ಮೈಸೂರು ಬಾಯ್ ಸ್ಕೌಟು ಮಂಡಲಿಗೆ ಪೋಷಕರಾಗಿರುವರು.

ಮೈಸೂರು ಸಂಸ್ಥಾನದ ಬಾಯ್ ಸ್ಕೌಟು ಮಂಡಲಿಯ ಆಡಳಿತವನ್ನು ಸ್ಟೇಟ್ ಸ್ಕೌಟ್ (ಹೆಡ್‌ಕ್ವಾರ್ಟರ್ಸ್) ಕೌನ್ಸಿಲ್ ಎಂಬ ಒಂದು ಸಭೆಯು ವಹಿಸಿಕೊಂಡಿರುತ್ತದೆ. ಈ ಸಭೆಯಲ್ಲಿ ಸರ್ಕಾರದ, ವಿದ್ಯಾ ಖಾತೆಯ, ಕಸುಬಿನ ಮತ್ತು ವಾಣಿಜ್ಯದ ಕಡೆಗಳಿಂದಲೂ ಪ್ರತಿನಿಧಿಗಳು ನೇಮಕರಾಗಿ ಸದಸ್ಯರಾಗಿರುತ್ತಾರೆ.

## ಮೈಸೂರು ಸಂಸ್ಥಾನದ ಶ್ರೀಮದ್ಯುವರಾಜರವರು
### ನಮ್ಮ ನಾಯಕರು.



ಸರ್ ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಬಹದ್ದೂರ್, ಜಿ. ಸಿ. ಐ. ಇ.

ಮುಖ್ಯ ಸ್ಕೌಟುಗಳಾಗಿಯೂ ಈ ಕೌನ್ಸಿಲ್ಲಿನ ಅಧ್ಯಕ್ಷರಾಗಿಯೂ ಇರುವರು.

ಸ್ಟೇಟ್ ಸ್ಕೌಟ್ ಕೌನ್ಸಿಲ್ಲಿನ ಕೆಲಸಗಳು ಇವು :

೧. ಸಂಸ್ಥಾನದಲ್ಲಿ ಮಂಡಲಿಯ ಸಾಮಾನ್ಯ ನಿಯಮಗಳನ್ನು ಗೊತ್ತುಮಾಡುವುದು ಮತ್ತು ಈ ನಿಬಂಧನೆಗಳಲ್ಲಿ ಅವಶ್ಯಕವೆಂದು ತೋರಿಬಂದದ್ದನ್ನು ಸರಿಪಡಿಸುವುದು.

೨. ಮಂಡಲಿಯ ಕೆಲಸ ಕಾರ್ಯಗಳನ್ನು ನಿರ್ವಹಿಸುವುದಕ್ಕಾಗಿ ಕಾರ್ಯನಿರ್ವಾಹಕ ಸಮಿತಿಯೊಂದನ್ನು ಪ್ರತಿವರ್ಷವೂ ಚುನಾಯಿಸಿ ಏರ್ಪಡಿಸುವುದು.

೩. ಸಮಯ ಬಿದ್ದಹಾಗೆ ಕಾಲಕಾಲಕ್ಕೆ ಒಬ್ಬ ಅಥವಾ ಹೆಚ್ಚು ಮಹನೀಯರುಗಳನ್ನು ಮುಖ್ಯ ಸ್ಕೌಟು ಕಮೀಷನರ ಸ್ಥಾನಕ್ಕೆ ನೇಮಕಮಾಡಲು ಮುಖ್ಯ ಸ್ಕೌಟುಗಳಿಗೆ ಶಿಫಾರ್ಸು ಮಾಡುವುದು.

೪. ಕಾರ್ಯನಿರ್ವಾಹಕ ಸಮಿತಿಗೆ ಹಣ ಕಾಸುಗಳ ಆಯವ್ಯಯದ ವಿಚಾರದಲ್ಲಿ ಸಲಹೆಗಳನ್ನು ಕೊಡುವುದು.

೫. ಸಾಮಾನ್ಯವಾಗಿ ಸ್ಕೌಟು ಚಳುವಳಿಯನ್ನು ಅಭಿವೃದ್ಧಿಗೊಳಿಸುವುದು, ಮಾತೃಭಾಷೆ ಅಥವಾ ಇತರ ಭಾಷೆಗಳಲ್ಲಿ ಸ್ಕೌಟು

ಕ್ರಮಾಚರಣೆಗೆ ಸಂಬಂಧಪಟ್ಟ ಪುಸ್ತಕಗಳ ಮೂಲಕ ಜನರಲ್ಲಿ ವಿದ್ಯಾಭಿವೃದ್ಧಿಯನ್ನು ಮಾಡುವುದು, ಮತ್ತು ಸಂಸ್ಥಾನದಲ್ಲಿ ಡಿಸ್ಟ್ರಿಕ್ಟ್ ಸ್ಕೌಟು ಕೌನ್ಸಿಲ್ ಮತ್ತು ಸ್ಥಳಿಕ ಸ್ಕೌಟು ಸಂಘಗಳ ಸ್ವಾತಂತ್ರ್ಯ ಮತ್ತು ಈ ನಿಯಮಗಳಲ್ಲಿರುವಂತೆ ಕೆಲಸ ಕಾರ್ಯಗಳನ್ನು ನಿರ್ವಹಿಸುವ ಅಧಿಕಾರಕ್ಕೆ ಕೈ ಹಾಕದೆ ಅವು ಒಮ್ಮತದಿಂದ ತಮ್ಮ ತಮ್ಮ ಕೆಲಸ ಕಾರ್ಯಗಳನ್ನು ನಿರ್ವಹಿಸುವಂತೆ ಏರ್ಪಡಿಸುವುದು.

## ಕಾರ್ಯನಿರ್ವಾಹಕ ಸಮಿತಿ

ಈ ಕಾರ್ಯನಿರ್ವಾಹಕ ಸಮಿತಿಗೆ ಏಳು ಮಂದಿ ಸದಸ್ಯರಿರುವರು. ಬೇಕಾದಲ್ಲಿ ಈ ಸಮಿತಿಯವರು ಈ ಸಂಖ್ಯೆಯನ್ನು ಹೆಚ್ಚಿಸಿಕೊಳ್ಳಬಹುದು. ಈ ಸಮಿತಿಗೆ ವಿದ್ಯಾಖಾತೆಯ ಡೈರೆಕ್ಟರವರೇ ಅಧ್ಯಕ್ಷರು ಕೆಲಸ ಕಾರ್ಯಗಳನ್ನು ನಿರ್ವಹಿಸುವುದಕ್ಕೂ, ಆಡಳಿತವನ್ನು ಸಮರ್ಪಕವಾಗಿಟ್ಟುಕೊಳ್ಳುವುದಕ್ಕೂ, ಮೇಲ್ವಿಚಾರಿಕೆಯನ್ನು ಸರಿಯಾಗಿ ನೋಡಿಕೊಳ್ಳುವುದಕ್ಕೂ ಸಂಪೂರ್ಣ ಜವಾಬ್ದಾರಿಯು ಈ ಸಮಿತಿಗೆ ಉಂಟು.

ಮುಖ್ಯ ಸ್ಕೌಟುಗಳು ಸ್ಟೇಟ್ ಸ್ಕೌಟ್ ಕೌನ್ಸಿಲ್ಲಿನ ಶಿಫಾರ್ಸಿನ ಮೇಲೆ ಒಬ್ಬ ಮುಖ್ಯ ಸ್ಕೌಟು ಕಮೀಷನರನ್ನು ನೇಮಿಸುತ್ತಾರೆ. ಇವರಿಗೆ

ಮುಖ್ಯ ಕಮೀಷನರು.



**ಕೆ. ಶಂಕರನಾರಾಯಣರಾವ್, ಎಂ.ಎ., ಬಿ.ಎಲ್.**

ಮಂಡಲಿಯ ನಿಯಮಗಳ ಮೇಲೆ ಸಾಮಾನ್ಯ ತನಿಖೆ ಮತ್ತು ಆಡಳಿತವಿದೆ.

ಮೈಸೂರು ಸಂಸ್ಥಾನದ ಸ್ಕೌಟು ಮಂಡಲಿಯ ಒಟ್ಟು ಆಡಳಿತವನ್ನು ನೋಡಿಕೊಳ್ಳುವುದಕ್ಕೆ 'ಆರ್ಗನೈಸಿಂಗ್ ಕಮೀಷನರ್' ಎಂಬ ಪ್ರವರ್ತಕಾಧಿಕಾರಿಗಳನ್ನು ಮೇಲೆ ಹೇಳಿದ ಕಾರ್ಯನಿರ್ವಾಹಕ ಸಮಿತಿಯವರು ನೇಮಕಮಾಡುತ್ತಾರೆ. ಈ ಅಧಿಕಾರಿಗಳು ಸ್ಟೇಟ್ ಸ್ಕೌಟ್ ಕೌನ್ಸಿಲ್ಲಿಗೂ, ಕಾರ್ಯನಿರ್ವಾಹಕ ಸಮಿತಿಗೂ ಕಾರ್ಯದರ್ಶಿಗಳಾಗಿರುವರು. ಕಾರ್ಯನಿರ್ವಾಹಕ ಸಮಿತಿಯವರು ಸೂಕ್ತ ತೋರಿದಂತೆ ಆರ್ಗನೈಸಿಂಗ್ ಕಮೀಷನರ ಸಹಾಯಕ್ಕೆ ಸಿಬ್ಬಂದಿಯನ್ನು ಕೊಡುವರು.

ಸ್ಟೇಟ್ ಸ್ಕೌಟ್ ಕೌನ್ಸಿಲ್ಲಿನ ಸದಸ್ಯರು ಮತ್ತು ಡಿಸ್ಟ್ರಿಕ್ಟ್ ಸ್ಕೌಟು ಕೌನ್ಸಿಲ್ಲುಗಳ ಅಧ್ಯಕ್ಷರುಗಳು, ಸ್ಕೌಟು ಕಮೀಷನರುಗಳು ಸಮಾನ ಪದವಿಯವರಾಗಿರುತ್ತಾರೆ. ಇವರು ಸ್ಕೌಟು ಕೂಟ, ಆಟ, ಪ್ರದರ್ಶನ ಮುಂತಾದ ಉತ್ಸವ ಸಮಯಗಳಲ್ಲಿ ಆ ಪದವಿಗೆ ತಕ್ಕ ಬಿರುದು ಪಟ್ಟಿಗಳನ್ನೂ, ಉಡುಪುಗಳನ್ನೂ ಧರಿಸಿಕೊಳ್ಳಬಹುದು.

ಮೈಸೂರು ಸಂಸ್ಥಾನದ ಸ್ಕೌಟು ಮಂಡಲಿಯ ಹೆಡ್ ಕ್ವಾರ್ಟರ್ಸ್, ಬೆಂಗಳೂರಿನ ಕೋಟೆಯಲ್ಲಿರುವ ಟೀಪುಸುಲ್ತಾನರ ಅರಮನೆಯಲ್ಲಿದೆ. ಎಲ್ಲ ಪತ್ರ ವ್ಯವಹಾರಗಳನ್ನೂ ಆರ್ಗನೈಸಿಂಗ್ ಕಮೀಷನರವರ ವಿಳಾಸಕ್ಕೆ ನಡೆಸಬೇಕು.

## ಡಿಸ್ಟ್ರಿಕ್ಟ್ ಸ್ಕೌಟು ಕೌನ್ಸಿಲ್

ಪ್ರತಿ ಡಿಸ್ಟ್ರಿಕ್ಟಿನಲ್ಲಿಯೂ, ಹೆಡ್‌ಕ್ವಾರ್ಟರ್ಸ್‌ನ ಅಪ್ಪಣೆಯನ್ನು ಪಡೆದು, ಡಿಸ್ಟ್ರಿಕ್ಟ್ ಸ್ಕೌಟು ಕೌನ್ಸಿಲ್ಲುಗಳನ್ನು ಸ್ಥಾಪಿಸಬಹುದು.

ಡಿಸ್ಟ್ರಿಕ್ಟ್ ಸ್ಕೌಟು ಕೌನ್ಸಿಲ್ಲಿನ ಕಾರ್ಯಗಳೂ ಮತ್ತು ಅಧಿಕಾರಗಳೂ ಇವು :

(ಅ) ಸ್ಥಳಿಕ ಸ್ಕೌಟು ಸಂಘಗಳ ಮತ್ತು ಅವುಗಳ ಕೈ ಕೆಳಗಿರುವ ದಳ ಮತ್ತು ಗುಂಪುಗಳ ಸ್ವಾತಂತ್ರ್ಯ ಮತ್ತು ಉದ್ಯಮಶೀಲ

ತೆಗೆ ಕೈ ಹಾಕದೆ, ಮೈಸೂರು ಬಾಯ್ ಸ್ಕೌಟು ಮಂಡಲಿಯ ರಚನೆ ಮತ್ತು ನಿಯಮಗಳಲ್ಲಿರುವಂತೆ, ತಮ್ಮ ಡಿಸ್ಟ್ರಿಕ್ಟುಗಳಲ್ಲಿ ಸ್ಕೌಟು ಚಳುವಳಿಯನ್ನು ಅಭಿವೃದ್ಧಿ ಪಡಿಸುವುದು.

(ಆ) ಡಿಸ್ಟ್ರಿಕ್ಟಿನ ಸ್ಕೌಟು ಕೆಲಸದ ಆಡಳಿತದಲ್ಲಿ ಡಿಸ್ಟ್ರಿಕ್ಟು ಕಮೀಷನರಿಗೆ ಸಲಹೆಗಳನ್ನು ಕೊಡುವುದು.

(ಇ) ಡಿಸ್ಟ್ರಿಕ್ಟಿನ ಹಣವನ್ನು ಹೊಂದುವುದು ಮತ್ತು ಅದರ ಖರ್ಚನ್ನು ನೋಡಿಕೊಳ್ಳುವುದು.

(ಈ) ಡಿಸ್ಟ್ರಿಕ್ಟಿನಲ್ಲಿ ಹುಡುಗರೊಂದಿಗೆ ಅಥವಾ ಹುಡುಗರ ಅಭಿವೃದ್ಧಿಗಾಗಿ ಏರ್ಪಡಿಸಲ್ಪಟ್ಟಿರುವ ಎಲ್ಲಾ ಸಂಸ್ಥೆಗಳೊಂದಿಗೆಯೂ ಸೌಹಾರ್ದಭಾವದಿಂದಿರುವುದು.

(ಉ) ಕೌನ್ಸಿಲ್ಲು ಕಾಲಕಾಲಕ್ಕೆ ಏರ್ಪಡಿಸುವ ನಿಯಮಗಳಿಗನುಗುಣವಾಗಿ ಸ್ಥಳಿಕ ಸಂಘ, ದಳ ಮತ್ತು ಗುಂಪುಗಳ ಸಮಿತಿಗಳ ಸ್ಥಾಪನೆಗೆ ಸಹಾಯಮಾಡುವುದು.

(ಊ) ಕಾನೂನುಗಳನ್ನು ಗೊತ್ತುಮಾಡಿ, ಹೆಡ್‌ಕ್ವಾರ್ಟರ್ಸ್ ಕಾರ್ಯನಿರ್ವಾಹಕ ಸಮಿತಿಗೆ ಒಪ್ಪಿಕೆಗೆ ಕಳುಹಿಸುವುದು.

(ಎ) ಸ್ಟೇಟ್ ಸ್ಕೌಟ್ ಕೌನ್ಸಿಲ್ಲಿಗೆ ಒಂದು ವಾರ್ಷಿಕ ವರದಿಯನ್ನು ಒಪ್ಪಿಸುವುದು ಮತ್ತು ಹೆಡ್‌ಕ್ವಾರ್ಟರ್ಸ್‌ನಿಂದ ಕಾಲಕಾಲಕ್ಕೆ ಬೇಕಾಗಬಹುದಾದ ಇತರ ವಿಷಯಗಳನ್ನು ಒದಗಿಸಿ ಕೊಡುವುದು.

ಇವರು ಡಿಸ್ಟ್ರಿಕ್ಟು ಸ್ಕೌಟು ಕೌನ್ಸಿಲ್ಲಿಗೆ ಸದಸ್ಯರಾಗಬಹುದು :

(ಅ) ಕೌನ್ಸಿಲ್ ಅನ್ನು ಏರ್ಪಡಿಸುವ ಕಾಲದಲ್ಲಿ ಬಹಿರಂಗ ಸಭೆಯಲ್ಲಿ ಚುನಾಯಿಸಲ್ಪಟ್ಟವರು.

(ಆ) ಸ್ಥಳೀಕ ಸ್ಕೌಟು ಸಂಘಗಳ ಪ್ರತಿನಿಧಿಗಳು: ಪ್ರತಿಯೊಂದು ಸ್ಥಳೀಕ ಸ್ಕೌಟು ಸಂಘಕ್ಕೂ ಒಬ್ಬ ಪ್ರತಿನಿಧಿಯನ್ನು ನೇಮಕ ಮಾಡಲು ಹಕ್ಕಿದೆ ಮತ್ತು ಸಂಘದ ಸರಹದ್ದಿನಲ್ಲಿ ಇರುವ ಹೆಚ್ಚಿನ ಐದ್ಯೆದು ದಳಗಳಿಗೂ ಒಬ್ಬೊಬ್ಬರಂತೆ.

(ಇ) ಡಿಸ್ಟ್ರಿಕ್ಟಿನಲ್ಲಿರುವ ಎಲ್ಲಾ ಡಿಸ್ಟ್ರಿಕ್ಟು ಮತ್ತು ಸಹಾಯಕ ಡಿಸ್ಟ್ರಿಕ್ಟು ಕಮೀಷನರುಗಳು.

(ಈ) ಕಾಲಕಾಲಕ್ಕೆ ಡಿಸ್ಟ್ರಿಕ್ಟು ಸ್ಕೌಟು ಕೌನ್ಸಿಲ್ಲಿನಿಂದ ಸೇರಿಸಿ ಕೊಳ್ಳಲ್ಪಡುವ ಇತರರು.

ಪ್ರತಿ ಕೌನ್ಸಿಲ್ಲಿನಲ್ಲಿಯೂ ಒಬ್ಬ ಅಧ್ಯಕ್ಷರು, ಒಬ್ಬ ಅಥವಾ ಹೆಚ್ಚು ಉಪಾಧ್ಯಕ್ಷರು, ಕೋಶಾಧ್ಯಕ್ಷರು ಮತ್ತು ಒಬ್ಬ ಕಾರ್ಯದರ್ಶಿಗಳು ಇರುತ್ತಾರೆ.

## ಸ್ಥಳೀಕ ಸ್ಕೌಟು ಸಂಘಗಳು

ಒಂದು ಪಟ್ಟಣ ಅಥವಾ ಊರು, ಇವುಗಳ ಸರಹದ್ದಿನಲ್ಲಿ ಯಾವ ಯಾವ ಸ್ಕೌಟು ದಳಗಳೂ, ಗುಂಪುಗಳೂ ಇರುವುದೋ ಅವುಗಳ ಮೇಲ್ವಿಚಾರಣೆಗಾಗಿ ಹೆಡ್‌ಕ್ವಾರ್ಟರ್ಸಿನ ಅಪ್ಪಣೆಯನ್ನು ಪಡೆದು ಸ್ಥಳೀಕ ಸ್ಕೌಟು ಸಂಘಗಳನ್ನು ಸ್ಥಾಪಿಸಬಹುದು.

ಈ ಸಂಘದವರು, ಅಧ್ಯಕ್ಷ, ಉಪಾಧ್ಯಕ್ಷ, ಕೋಶಾಧ್ಯಕ್ಷ ಮತ್ತು ಗೌರವ ಕಾರ್ಯದರ್ಶಿಗಳೆಂಬ ಅಧಿಕಾರಿಗಳನ್ನು (ವರ್ಷಂಪ್ರತಿ ಚುನಾವಣೆಯಿಂದ) ನೇಮಕಮಾಡಿಕೊಳ್ಳಬೇಕು.

ಇವರು ಸ್ಥಳೀಕ ಸ್ಕೌಟು ಸಂಘಕ್ಕೆ ಸದಸ್ಯರಾಗಬಹುದು :

(ಅ) ಡಿಸ್ಟ್ರಿಕ್ಟು ಸ್ಕೌಟು ಕಮೀಷನರು; ಅವರ ಸಹಾಯಕರು; ಆ ಸರಹದ್ದಿನೊಳಗೆ ಸನ್ನದನ್ನು ಪಡೆದಿರುವ ಸ್ಕೌಟು ದಳಪತಿ.

(ಆ) ಸಂಘದ ಕಾನೂನುಗಳನ್ನು (ಇದ್ದರೆ) ಅನುಸರಿಸಿ ಚುನಾಯಿಸಲ್ಪಟ್ಟವರು.

ಸಹಾಯಕ ದಳಪತಿಗಳೂ, ಸ್ಕಾಟು ಕ್ರಮಾಚರಣೆಯಲ್ಲಿ ಆದರ ಶ್ರದ್ಧೆಗಳುಳ್ಳ ದೊಡ್ಡ ಮನುಷ್ಯರೂ, ಮಹಿಳೆಯರೂ ಮೇಲೆ ಹೇಳಿದ ಚುನಾವಣೆಗೆ ಅರ್ಹರಾಗಿರುತ್ತಾರೆ. ಅವಶ್ಯಕವಾಗಿ ತೋರಿ ಬಂದರೆ ಸಂಘವು ಸಂಘದ ಕೆಲಸ ಕಾರ್ಯಗಳನ್ನು ನಿರ್ವಹಿಸುವುದಕ್ಕಾಗಿ ಒಂದು ಕಾರ್ಯ ನಿರ್ವಾಹಕ ಸಮಿತಿಯನ್ನು ನೇಮಕಮಾಡಿಕೊಳ್ಳಬಹುದು. ದಕ್ಷನಾದ ಕಾರ್ಯದರ್ಶಿಯನ್ನು ನೇಮಿಸುವುದು ಅತಿ ಮುಖ್ಯ.

ಸ್ಥಳಿಕ ಸ್ಕಾಟು ಸಂಘದ ಕಾರ್ಯಗಳು ಇವು :

(ಅ) ಆ ಸರಹದ್ದಿನಲ್ಲಿರುವ ದಳ ಮತ್ತು ಗುಂಪುಗಳ ಸ್ವಾತಂತ್ರ್ಯ ಮತ್ತು ಉದ್ಯಮಶೀಲತೆಗಳನ್ನು ನಷ್ಟಗೊಳಿಸದೆ, ಯಾವ ರೀತಿ ಸ್ಕಾಟು ಕ್ರಮಾಚರಣೆಯು ಅಭಿವೃದ್ಧಿಗೆ ಬರಬಹುದೋ ಆ ರೀತಿ ಅದಕ್ಕೆ ತಕ್ಕ ಪ್ರೋತ್ಸಾಹವನ್ನು ಕೊಡುವುದು ಮತ್ತು ಮೇಲ್ವಿಚಾರಣೆಯನ್ನು ನೋಡಿಕೊಳ್ಳುವುದು.

(ಆ) ಯೋಗ್ಯರಾದವರನ್ನು ಅಧಿಕಾರಿಗಳನ್ನಾಗಿ ನೇಮಿಸಿ, ಅವರಿಗೆ ಬೇಕಾದ ಶಿಕ್ಷಣವನ್ನೂ ಮತ್ತು ಮುಖ್ಯ ಸ್ಕಾಟುಗಳ ಸನ್ನದನ್ನೂ ಕೊಡಿಸುವಂತೆ ಡಿಸ್ಟ್ರಿಕ್ಟು ಸ್ಕಾಟು ಕಮೀಷನರಿಗೆ ಶಿಫಾರ್ಸು ಮಾಡುವುದು.

(ಇ) ಆ ಸರಹದ್ದಿನಲ್ಲಿರುವ ದಳ, ಗುಂಪು, ಸ್ಕಾಟು ಅಧಿಕಾರಿ, ಸ್ಕಾಟು ಮತ್ತು ಮರಿ ಇವರನ್ನು ಹೆಡ್ ಕ್ವಾರ್ಟರ್ಸ್‌ನಲ್ಲಿ ರಿಜಿಸ್ಟರು ಮಾಡಿಸುವುದು. ಕಮೀಷನರಿಂದ ವಿಚಾರಣೆಯಾಗುವ ತನಕ ದಳ, ಗುಂಪು, ತುಕ್ಕುಡಿ, ಪಂಗಡ, ಅಧಿಕಾರಿ, ರೋವರ್, ಸ್ಕಾಟು, ಅಥವಾ ಮರಿ ಮೊದಲಾದವರನ್ನು

ರಿಜಿಸ್ಟರು ಮಾಡಿಸಲು ತಿರಸ್ಕರಿಸುವುದು ಅಥವಾ ಸಸ್ಪೆಂಡು ಮಾಡುವುದು; ಹೆಡ್ ಕ್ವಾರ್ಟರ್ಸ್‌ನಲ್ಲಿ ರಿಜಿಸ್ಟರು ಮಾಡದೆ ಹೋದಲ್ಲಿ ಯಾವ ಸ್ಕೌಟು ಅಧಿಕಾರಿಯನ್ನಾಗಲಿ, ರೋವರ್, ಸ್ಕೌಟು ಅಥವಾ ಮರಿಯನ್ನಾಗಲಿ ಅಂಗೀಕರಿಸುವುದಿಲ್ಲ. ಬೇಕಾದರೆ ರೋವರ್, ಸ್ಕೌಟು ಅಥವಾ ಮರಿಗಳನ್ನು ರಿಜಿಸ್ಟರು ಮಾಡಿಸತಕ್ಕ ಮತ್ತು ಸಸ್ಪೆಂಡು ಮಾಡತಕ್ಕ ಅಧಿಕಾರವನ್ನು ಸ್ಥಳಿಕ ಸಂಘವು ಆಯಾ ದಳಪತಿ ಅಥವಾ ಹಿರಿಯಣ್ಣಂದಿರಿಗೆ ವಹಿಸಬಹುದು. ಆದರೆ ಒಬ್ಬ ರೋವರ್, ಸ್ಕೌಟು ಅಥವಾ ಮರಿಯು ಸಸ್ಪೆಂಡಿಗೆ ಗುರಿಯಾಗಿದ್ದರೆ ಅವನು ಸ್ಥಳಿಕ ಸಂಘಕ್ಕಾಗಲಿ ಡಿಸ್ಟ್ರಿಕ್ಟು ಕಮೀಷನರಿಗಾಗಲಿ ಅಪೀಲ್ ಮಾಡಿಕೊಳ್ಳಬಹುದು.

(ಈ) ಎಲ್ಲಾ ಪ್ರವೀಣತೆಯ ಪದಕಗಳ ಪರೀಕ್ಷೆಗಳಿಗೂ ಮತ್ತು ಎಲ್ಲಾ ರೋವರ್, ಸ್ಕೌಟು ಮತ್ತು ಮರಿಗಳ ಪಟ್ಟಿಗಳನ್ನು ಕೊಡುವ ಜವಾಬ್ದಾರಿಯನ್ನು ವಹಿಸುವುದಕ್ಕೂ ಸ್ವತಂತ್ರರಾಗಿರುವ ಮಹಿಳೆಯರ ಮತ್ತು ಸಭ್ಯರ ಸಮಿತಿಗಳನ್ನು ಏರ್ಪಡಿಸುವುದು.

(ಉ) ಹಣದ ಲೆಕ್ಕಾಚಾರಕ್ಕೂ ದಳ ಮತ್ತು ಗುಂಪುಗಳ ಸಾಮಾನುಗಳ ಜವಾಬ್ದಾರಿಗೂ ದಳ ಮತ್ತು ಗುಂಪುಗಳ ಸಮಿತಿಗಳನ್ನು ಏರ್ಪಡಿಸಲು ಪ್ರೋತ್ಸಾಹಿಸುವುದು.

(ಊ) ಡಿಸ್ಟ್ರಿಕ್ಟು ಸ್ಕೌಟು ಕೌನ್ಸಿಲ್ಲಿನ ಅಥವಾ ಡಿಸ್ಟ್ರಿಕ್ಟು ಸ್ಕೌಟು ಕೌನ್ಸಿಲ್ಲು ಇಲ್ಲದಿದ್ದಲ್ಲಿ ಹೆಡ್ ಕ್ವಾರ್ಟರ್ಸ್‌ನ ಅಂಗೀಕಾರಕ್ಕಾಗಿ ಕಾನೂನುಗಳನ್ನು ಒಪ್ಪಿಸುವುದು.

ಒಂದು ಸರಹದ್ದಿನ ಮೇಲೆ ಅಧಿಕಾರವನ್ನು ವಹಿಸತಕ್ಕ ಸನ್ನದನ್ನು ಸ್ಥಳಿಕ ಸ್ಕೌಟು ಸಂಘಕ್ಕೆ ಕೊಡತಕ್ಕವರೂ ಹಿಂದಕ್ಕೆ ತೆಗೆದುಕೊಳ್ಳತಕ್ಕವರೂ ಹೆಡ್‌ಕ್ವಾರ್ಟರ್ಸ್‌ನವರೇ.

ಡಿಸ್ಟ್ರಿಕ್ಟು ಸ್ಕೌಟು ಕಮೀಷನರು ಸ್ಥಳಿಕ ಸಂಘದ ಅಧ್ಯಕ್ಷರಾಗಬಹುದು; ದಳಪತಿ ಅಥವಾ ಹಿರಿಯಣ್ಣನು ಕೂಡದು. ಆದರೆ ಅನಿರ್ವಾಹ ಸಂದರ್ಭದಲ್ಲಿ ಹೆಡ್ ಕ್ವಾರ್ಟರ್ಸ್‌ನ ಅಪ್ಪಣೆಯನ್ನು ಪಡೆದು ಆಗಬಹುದು.

ಸಹಾಯಕ ರೋವರ್ ನಾಯಕ, ಸಹಾಯಕ ದಳಪತಿ ಮತ್ತು ಹಿರಿಯಣ್ಣಂದಿರು ಸಭೆಗಳಿಗೆ ಹಾಜರಾಗಬಹುದು. ಆದರೆ (ಅವರು ಚುನಾಯಿಸಲ್ಪಟ್ಟ ಸದಸ್ಯರಾದ ಹೊರತೂ) ಓಟು ಮಾಡಕೂಡದು; ಒಂದು ವೇಳೆ ದಳಪತಿ ಅಥವಾ ಹಿರಿಯಣ್ಣನು ಗೈರು ಹಾಜರಾಗಿದ್ದು ದಳ ಅಥವಾ ಗುಂಪಿನ ಪ್ರತಿನಿಧಿಯಾಗಿ ಬಂದಿದ್ದರೆ ಆಗ ಓಟು ಮಾಡಬಹುದು. ಇಂತಹ ಸಂದರ್ಭದಲ್ಲಿ ಒಬ್ಬ ಸಹಾಯಕನು ಮಾತ್ರ ಓಟು ಕೊಡಬೇಕು.

ಸ್ಥಳಿಕ ಸಂಘದ ಅಧಿಕಾರಕ್ಕೊಳಪಡುವ ಸರಹದ್ದನ್ನು ಡಿಸ್ಟ್ರಿಕ್ಟು ಸ್ಕೌಟು ಕೌನ್ಸಿಲ್ಲಿನವರು ಅಥವಾ ಹೆಡ್‌ಕ್ವಾರ್ಟರ್ಸ್‌ನವರು ನಿಶ್ಚಯಿಸಿಕೊಡುತ್ತಾರೆ.

ಎಲ್ಲಿ ದಳ ಮತ್ತು ಗುಂಪುಗಳ ಮೇಲ್ವಿಚಾರಣೆಗೆ ಸ್ಥಳಿಕ ಸಂಘಗಳಿರುವುದಿಲ್ಲವೊ ಅಂಥವುಗಳ ಮೇಲ್ವಿಚಾರಣೆ ಮುಂತಾದ ಸ್ಥಳಿಕ ಸಂಘದ ಕಾರ್ಯಗಳನ್ನೆಲ್ಲಾ ಡಿಸ್ಟ್ರಿಕ್ಟು ಸ್ಕೌಟು ಕೌನ್ಸಿಲ್ ಅಥವ ಹೆಡ್‌ಕ್ವಾರ್ಟರ್ಸ್‌ನವರೇ ನಡೆಸುತ್ತಾರೆ.

## ಗುಂಪುಗಳು

ಒಂದು ಮರಿಗಳ ಗುಂಪಿನಲ್ಲಿ ಎಷ್ಟು ಹುಡುಗರು ಬೇಕಾದರೂ ಇರಬಹುದು; ಆದರೆ ಇಪ್ಪತ್ತುನಾಲ್ಕಕ್ಕಿಂತ ಹೆಚ್ಚಾಗಿದ್ದರೆ ಒಂದು ಅಥವಾ ಹೆಚ್ಚು ಕಿರಿಯಣ್ಣಂದಿರನ್ನು ನೇಮಿಸಲೇ ಬೇಕು. ಹೆಡ್ ಕ್ವಾರ್ಟರ್ಸ್‌ನಲ್ಲಿ ರಿಜಿಸ್ಟರು ಮಾಡಿಸದೇ ಇದ್ದಲ್ಲಿ ಯಾವ ಗುಂಪನ್ನೂ ಅಂಗೀಕರಿಸುವುದಿಲ್ಲ.

ಪ್ರತಿಯೊಂದು ಗುಂಪೂ ತಮಗಭಿಮತವಾದ ಪೌರಾಣಿಕ ಅಥವಾ ಐತಿಹಾಸಿಕ ಶೂರನ ಹೆಸರಿನಿಂದ ಕರೆಯಲ್ಪಡುತ್ತದೆ. ಉದಾಹರಣೆಗಾಗಿ—ಚಾಮುಂಡಿ ಗುಂಪು; ಅಭಿಮನ್ಯು ಗುಂಪು; ಕಂಠೀರವ ಗುಂಪು; ಶಿವಾಜಿ ಗುಂಪು.

ಪ್ರತಿಯೊಂದು ಗುಂಪೂ ಒಂದು ಗೊತ್ತಾದ ಬಣ್ಣದ ಕಂಠ ವಸ್ತ್ರವನ್ನು ಆರಿಸಿಟ್ಟುಕೊಳ್ಳಬೇಕು; ಮತ್ತು ಅದನ್ನು ಹೆಡ್‌ಕ್ವಾರ್ಟರ್ಸ್‌ನಲ್ಲಿ ರಿಜಿಸ್ಟರು ಮಾಡಿಸಬೇಕು.

## ಪಂಗಡಗಳು

ಗುಂಪುಗಳಲ್ಲಿ ತುಕ್ಕುಡಿಗಳ ಆಡಳಿತವು ಇಚ್ಛಾನುಸಾರ. ಮರಿಗಳ ತುಕ್ಕುಡಿಗೆ 'ಪಂಗಡ' ಎಂದು ಹೆಸರು. ಒಂದೊಂದು ಪಂಗಡದಲ್ಲಿ ಐದು ಮರಿಗಳೂ ಮತ್ತು ಆರನೆಯವನಾದ ಒಬ್ಬ ನಾಯಕನೂ ಇರುತ್ತಾರೆ.

ಪ್ರತಿಯೊಂದು ಪಂಗಡವೂ ಯಾವುದಾದರೊಂದು ಬಣ್ಣದಿಂದ ಕರೆಯಲ್ಪಡುತ್ತದೆ. ಉದಾಹರಣೆಗಾಗಿ—ಕೆಂಪು ಪಂಗಡ; ಹಳದಿಯ ಪಂಗಡ; ಹಸರು ಪಂಗಡ; ನೀಲಿ ಪಂಗಡ; ಪಂಗಡದ ಪ್ರತಿಯೊಬ್ಬ ಮರಿಯೂ ತನ್ನ ಪಂಗಡದ ಭುಜದ ತೇಪೆಯನ್ನು ಧರಿಸಬೇಕು.



# ದರ್ಜೆಗಳು ಮತ್ತು ಅಧಿಕಾರಿಗಳು

### ಬಿರುದುಗಳು (Titles)

ಸೈನ್ಯದ ಅಥ[illegible]ಕರ ಹುದ್ದೆಗಳನ್ನು ತಿಳಿಸುವ ಬಿರುದುಗಳನ್ನೂ ಪದಗಳನ್ನೂ ಎಂದಿಗೂ ಉಪಯೋಗಿಸಕೂಡದು.

## ಮರಿಗಳು

### ಕೋಮಲಪಾದ (Tenderpad)

ಮರಿಯಾಗಬೇಕಾದರೆ ಹುಡುಗನು ೮ರಿಂದ ೧೧ ವರ್ಷ ವಯಸ್ಸಿನೊಳಗಿರಬೇಕು. ಅವನು ತನ್ನ ಹಿರಿಯಣ್ಣನಿಗೆ ತಾನು ಮರ ಭಾಷೆ, ನಿಯಮ, ಗುಟ್ಟಿನ ಗುರುತು ಮತ್ತು ವಂದನೆಗಳನ್ನು ತಿಳಿದಿರುವುದಾಗಿ ತೃಪ್ತಿಪಡಿಸಬೇಕು. ಅನಂತರ ಅವನು ಈ ಭಾಷೆಯನ್ನು ಕೊಡುತ್ತಾನೆ:—

ನಾನು—

೧. ದೇವರಿಗೂ, ಶ್ರೀಮನ್ಮಹಾರಾಜರಿಗೂ ಮತ್ತು ಗುಂಪಿನ ನಿಯಮಕ್ಕೂ ವಿಧೇಯನಾಗಿರುವುದಕ್ಕೂ,

೨. ಪ್ರತಿನಿತ್ಯವೂ ಯಾರಿಗಾದರೂ ಒಂದು ಉಪಕಾರವನ್ನು ಮಾಡುವುದಕ್ಕೂ, ನನ್ನ ಕೈಲಾದ ಮಟ್ಟಿಗೂ ಪ್ರಯತ್ನಿಸುತ್ತೇನೆಂದು ಭಾಷೆ ಕೊಡುತ್ತೇನೆ.

ಗುಂಪಿನ ನಿಯಮ—

೧. ಮರಿಯು ಹಿರಿಯರಿಗೆ ವಿಧೇಯನು.

೨. ಮರಿಯು ತನಗೆ ತಾನೇ ಸೋಲುವುದಿಲ್ಲ.

ಆಗ ಅವನು ಕೋಮಲಪಾದನು ಮತ್ತು ಮರಿಯ ಪದಕವನ್ನು ಧರಿಸಲು ಅರ್ಹನು.

ಆಮೇಲೆ ಎಡಗೈಯಿಂದಲೂ ಹತ್ತು ಗಜದೂರದಲ್ಲಿರುವ ಇನ್ನೊಬ್ಬ ಹುಡುಗನು ಆರರಲ್ಲಿ ನಾಲ್ಕು ಸಲವಾದರೂ ಹಿಡಿಯುವುದಕ್ಕಾಗುವಂತೆ ಚೆಂಡನ್ನು ಎಸೆಯಬೇಕು. ಹತ್ತು ಗಜದೂರದಿಂದ ಮತ್ತೊಬ್ಬ ಹುಡುಗನು ಎಸೆದ ಚೆಂಡನ್ನು ಆರರಲ್ಲಿ ನಾಲ್ಕು ಸಲವಾದರೂ ಒಂದು ಅಥವಾ ಎರಡು ಕೈಗಳಿಂದಲೂ ಹಿಡಿಯಬೇಕು.

(ಈ) ಎರಡು ಕಾಲುಗಳಿಂದಲೂ ಒಟ್ಟಿಗೆ ಮುವ್ವತ್ತು ಸಾರ್ತಿ ಹಗ್ಗದಿಂದ ಕುಪ್ಪಳಿಸಬೇಕು. ಮರಿಯು ಹಗ್ಗವನ್ನು ತಾನೇ ಹಿಂದಿನಿಂದ ತಿರುಗಿಸುತ್ತಾ ಮಂಡಿಗಳನ್ನು ಬಗ್ಗಿಸಿ ಕಾಲು ಬೆರಳುಗಳ ಮೇಲೆ ಮಾಡಬೇಕು. ೮×೧೫ ಅಂಗುಲಗಳ ಆಕೃತಿಯ ಮೂರು ಪುಸ್ತಕಗಳನ್ನು ಬರಿಯ ತಲೆಯ ಮೇಲೆ ಚಪ್ಪಟೆಯಾಗಿ ಇಟ್ಟುಕೊಂಡು ಕೈಗಳಲ್ಲಿ ಹಿಡಿದು ಕೊಳ್ಳದೆ ಕೆಳಕ್ಕೆ ಬೀಳಿಸದೆ ನೆಟ್ಟಗೆ ಹತ್ತು ಗಜಗಳು ನಡೆಯಬೇಕು.

(ಉ) ಹೇಗೆ ಮತ್ತು ಏಕೆ ತನ್ನ ಕೈ ಕಾಲುಗಳನ್ನು ಶುಭ್ರವಾಗಿಯೂ ಉಗುರುಗಳನ್ನು ಕೊಳೆಯಿಲ್ಲದಂತೆಯೂ ಕತ್ತರಿಸಿಯೂ ಮತ್ತು ಹಲ್ಲುಗಳನ್ನು ಶುಚಿಯಾಗಿಯೂ ಇಟ್ಟುಕೊಳ್ಳಬೇಕು? ಮತ್ತು ಮೂಗಿನಿಂದಲೇ ಏಕೆ ಉಸಿರಾಡಬೇಕು? ಎಂಬೀ ವಿಷಯಗಳನ್ನು ತಿಳಿದಿರಬೇಕು.

(ಊ) ಗಡಿಯಾರವನ್ನು ನೋಡಿ ಕಾಲವನ್ನು ಹೇಳಲು ಸಮರ್ಥನಾಗಿರಬೇಕು.

(ಏ) ಮರಿಯಾಗಿ ಮೂರು ತಿಂಗಳಾದರೂ ಸೇವೆ ಮಾಡಿರಬೇಕು.

ಈ ತಾರೆಯು ಸ್ಥಳಿಕ ಸಂಘದಿಂದ ಹಿರಿಯಣ್ಣನ ಶಿಫಾರ್ಸಿನ ಮೇಲೆ ಕೊಡಲ್ಪಡುವುದು.

## ಎರಡು ತಾರೆ ಮರಿ (Two Star Cub)

ತನ್ನ ಎರಡು ತಾರೆಯನ್ನು ಪಡೆಯುವ ಮೊದಲು ಒಬ್ಬ ಮರಿಯು :—

(ಅ) ಕೈಮರದ ಪದ್ಧತಿಯ ಕನ್ನಡ ಅಕ್ಷರ ಸಂಕೇತವನ್ನು ತಿಳಿದುಕೊಂಡಿರಬೇಕು ಮತ್ತು ನಾಲ್ಕಕ್ಕೆ ಮೂರು ಅಕ್ಷರಗಳನ್ನು ಸರಿಯಾಗಿ ಕಳುಹಿಸುವುದಕ್ಕೂ ಕಳುಹಿಸಿದುದನ್ನು ಓದುವುದಕ್ಕೂ ಸಮರ್ಥನಾಗಿರಬೇಕು.

(ಆ) ದಿಕ್ಸೂಚಿಯ ಎಂಟು ಮೂಲೆಗಳನ್ನು ತಿಳಿದುಕೊಂಡಿರಬೇಕು.

(ಇ) ಮೈಸೂರಿನ ಶ್ರೇಯಃಪ್ರಾರ್ಥನೆ (ಕಾಯೌ ಶ್ರೀಗೌರಿ)ಯನ್ನೂ ಮತ್ತು ವಂದೇಮಾತರಂ ಅನ್ನೂ ಹಾಡಬೇಕು.

(ಈ) ತನ್ನಿಂದಲೇ ಗಳಿಸಲ್ಪಟ್ಟ ನಾಲ್ಕು ಆಣೆಗಳನ್ನು 'ಸೇವಿಂಗ್ಸ್ ಬ್ಯಾಂಕ್' ನಲ್ಲಿ ಶೇಖರಿಸಿಡಬೇಕು.

(ಉ) ಮರ, ರೊಟ್ಟು ಅಥವಾ ಮಣ್ಣಿನಿಂದ ತನ್ನಿಂದಲೇ ಮಾಡಲ್ಪಟ್ಟ ತೃಪ್ತಿಕರವಾದ ಒಂದು ವಸ್ತುವಿನ ಮಾದರಿಯನ್ನು ಒಪ್ಪಿಸಬೇಕು ; ಅಥವಾ ಕಸೂತಿ, ಹೆಣಿಗೆ ಅಥವಾ ಕತ್ತಣಿ ಕೆಲಸದ ಒಂದು ಸಾಮಾನು ; ಅಥವಾ ತನ್ನಿಂದಲೇ ಬರೆಯಲ್ಪಟ್ಟ ಎಂಟು ರಾಷ್ಟ್ರಧ್ವಜಗಳು ಅಥವಾ ಪದಕಗಳ ಪಟ್ಟಿಗಳು ಅಥವಾ ಹೂಗಳ ಚಿತ್ರಗಳನ್ನು ಬಣ್ಣಗಳಿಂದ ಅಲಂಕರಿಸಿ ಅವುಗಳ ಹೆಸರುಗಳೊಂದಿಗೆ ಒಪ್ಪಿಸಬೇಕು.

(ಊ) ತನ್ನ ಪಂಚೆ, ಷರಟು ಅಥವಾ ಚಡ್ಡಿಯನ್ನು ಒಗೆದುಕೊಳ್ಳುವುದಕ್ಕೂ ಮತ್ತು ಅಂದವಾಗಿ ಮಡಿಸಿಟ್ಟುಕೊಳ್ಳುವುದಕ್ಕೂ ಬರಬೇಕು ಅಥವಾ (ತಾನೆ ಹಾಕಿಕೊಳ್ಳುವುದಾದರೆ) ಒಂದು ಜೊತೆ ಬೂಟ್ಸ್ ಅಥವಾ ಷೂಸ್ ಅನ್ನು ಒರೆಸಿ ಹೊಳೆಯುವಂತೆ ಬಣ್ಣ ಹಾಕಬೇಕು. ಬೆಂಕಿಯನ್ನು ಹೊತ್ತಿಡ-

ಬೇಕು; ಹದಿನೈದು ಮಾತುಗಳಿಗೆ ಕಡಮೆಯಿಲ್ಲದ ಬಾಯಿ ಮಾತಿನ ಸಮಾಚಾರವೊಂದನ್ನು ಗೊತ್ತಾದ ದಾರಿಯಲ್ಲಿ ಓಡಿಯಾಗಲಿ ಅಥವಾ ಬೈಸಿಕಲ್ ಮೇಲಾಗಲಿ ಹೋಗಿ ತಪ್ಪಿಲ್ಲದೇ ಸ್ಪಷ್ಟವಾಗಿ ತಿಳಿಸಬೇಕು.

(೭) ಕಾಲು ಬೆರಳುಗಳನ್ನು ಮುಟ್ಟುವ ಮತ್ತು ಮಂಡಿ ಮಡಿಸುವ ವ್ಯಾಯಾಮಗಳನ್ನು ಮಾಡಬೇಕು. ನೆಲದಿಂದ ಸುಮಾರು ಒಂದು ಮೇಜದಷ್ಟು ಎತ್ತರದಲ್ಲಿ ಹನ್ನೆರಡು ಅಡಿಗಳ ಉದ್ದ ಆರು ಅಂಗುಲಗಳ ಅಗಲವಿರುವ ಹಲಗೆಯ ಮೇಲೆ ನಡೆಯಬೇಕು.

(೮) ಕುಯ್ದ ಬೆರಳನ್ನು ತೊಳೆದು ಬಟ್ಟೆ ಕಟ್ಟುವುದು, ಬೆಂದ ಅಥವಾ ಸುಟ್ಟ ಗಾಯಗಳಿಗೆ ಚಿಕಿತ್ಸೆ ಮಾಡುವುದು ಮತ್ತು ಗಾಯಗಳಲ್ಲಿ ಕೊಳೆ ಸೇರುವುದರಿಂದ ಉಂಟಾಗುವ ಅಪಾಯಗಳನ್ನೂ ಅರಿತಿರಬೇಕು.

(೯) ಮರಿಯಾಗಿ ಆರು ತಿಂಗಳಾದರೂ ಸೇವೆ ಮಾಡಿರಬೇಕು.

ಈ ತಾರೆಯು ಸ್ಥಳಿಕ ಸಂಘದಿಂದ ನೇಮಿಸಲ್ಪಟ್ಟ ಪರೀಕ್ಷಕರ ಶಿಫಾರ್ಸಿನ ಮೇಲೆ ಕೊಡಲ್ಪಡುವುದು.

ಶರೀರದಲ್ಲಿ ಸಾಕಾದಷ್ಟು ತ್ರಾಣವಿಲ್ಲದ ಮರಿಗಳ ವಿಷಯದಲ್ಲಿ ಡಿಸ್ಟ್ರಿಕ್ಟ್ ಸ್ಕೌಟು ಕಮೀಷನರು ಮತ್ತು ಹೆಡ್ ಕ್ವಾರ್ಟರ್ಸ್‌ನವರ ಅನುಮತಿಯ ಪ್ರಕಾರ ಒಂದು ಮತ್ತು ಎರಡು ತಾರೆಯ ಕೆಲಸಗಳನ್ನು ತಿದ್ದುಪಡಿಸಬಹುದು.

ಎರಡನೆಯ ತಾರೆಯನ್ನು ಟೋಪಿಯ ಮೇಲೆ ಮರಿಯ ಪದಕದ ಎಡಗಡೆಯಲ್ಲಿ ಧರಿಸಬೇಕು.

## ಎರಡನೆ ಮರಿ (Cub Second)

ನಾಯಕನು ಗೈರ್‌ಹಾಜರಾದಾಗ ಅವನ ಕೆಲಸಗಳನ್ನು ನೋಡಿಕೊಳ್ಳಲು ಹಿರಿಯಣ್ಣನು ಒಬ್ಬ ಎರಡನೆ ಮರಿಯನ್ನು ಚುನಾಯಿಸುವನು.

ಸಮರೂಪವು ಕೋಮಲಪಾದನದರಂತೆಯೇ, ಆದರೆ ಎಡದ ಮೊಳಕೈನಿಂದ ಐದು ಅಂಗುಲಗಳ ಮೇಲೆ ಅರ್ಧ ಅಂಗುಲ ಅಗಲದ ಒಂದು ಹಳದಿಯ ಪಟ್ಟಿಯೊಂದಿಗೆ.

## ನಾಯಕ (Sixer)

ಮರಿಗಳ ಸಂಗಡದ ವಿಚಾರಣೆಯಲ್ಲಿರಲು ಹಿರಿಯಣ್ಣನು ಅವರಲ್ಲಿಯೇ ಒಬ್ಬ ಮರಿಯನ್ನು ನೇಮಿಸುವನು. ಇವನೇ ' ನಾಯಕ '. ಎಲ್ಲಾ ಮರಿಗಳಿಗಿಂತ ನಾಯಕನು ಹುದ್ದೆಯಲ್ಲಿ ಹೆಚ್ಚು.

ಸಮರೂಪವು ಕೋಮಲಪಾದನದರಂತೆಯೇ, ಆದರೆ ಎಡದ ಮೊಳಕೈನಿಂದ ಐದು ಅಂಗುಲಗಳ ಮೇಲೆ ಒಂದು ಅಂಗುಲ ದೂರದಲ್ಲಿ ಅರ್ಧ ಅಂಗುಲ ಅಗಲದ ಎರಡು ಹಳದಿಯ ಪಟ್ಟಿಗಳೊಂದಿಗೆ.

## ಹಿರಿ ನಾಯಕ (Senior Sixer)

ಒಂದು ಗುಂಪಿಗೆ ಒಬ್ಬನಿಗಿಂತ ಹೆಚ್ಚು ಹಿರಿನಾಯಕರನ್ನು ನೇಮಕ ಮಾಡಲು ಅಪ್ಪಣೆ ಇಲ್ಲ. ಆದರೆ ಹಿರಿನಾಯಕನನ್ನು ಹಿರಿಯಣ್ಣನು ನೇಮಕ ಮಾಡುವ ಮೊದಲು ಅವನಿಗೆ ಈ ಕೆಳಗೆಕಂಡ ಯೋಗ್ಯತೆಗಳಿವೆಯೇ ಎಂಬುದನ್ನು ನಿರ್ಧರಿಸಿಕೊಳ್ಳಬೇಕು :—

(ಅ) ಒಂದು ವರ್ಷಕ್ಕೆ ಕಡಮೆ ಇಲ್ಲದ ಒಟ್ಟಿನ ಸೇವೆ.

(ಆ) ನಾಯಕನಾಗಿ ಆರು ತಿಂಗಳಾದರೂ ಕೆಲಸ ಮಾಡಿರುವುದು.

(ಇ) ಎರಡು ತಾರೆ ಮರಿಯಾಗಿದ್ದು ಮರಿಗಳ ಪ್ರವೀಣತೆಯ ಪದಕಗಳಲ್ಲಿ ಎರಡನ್ನಾದರೂ ಪಡೆದಿರುವುದು.

ಹಿರಿನಾಯಕನು, ನಾಯಕನು ಹಾಕಿಕೊಳ್ಳುವಂತಹ ಒಂದು ಮೂರನೇ ಹಳದಿಯ ಪಟ್ಟಿಯನ್ನು ಧರಿಸುವನು.

## ಕಿರಿಯಣ್ಣ (Assistant Cubmaster)

ಹಿರಿಯಣ್ಣನಿಗೆ ಬೇಕಾಗುವ ಯೋಗ್ಯತೆಗಳೇ ಕಿರಿಯಣ್ಣನಿಗೂ ಅವಶ್ಯಕ; (ಉ) ಮತ್ತು (ಊ) ಎರಡು ವಿನಃ; ಆದರೆ, 'Scouting for Boys' ಎಂಬ ಪುಸ್ತಕದ ಸಾಮಾನ್ಯ ಜ್ಞಾನದ ಜೊತೆಗೆ 'The Wolf-Cub's Handbook' ನ ಪರಿಚಯವೂ ಇರಬೇಕು.

ಈ ಹುದ್ದೆಗೆ ಸ್ತ್ರೀಯರು ಯೋಗ್ಯರು.

ಸಮರೂಪವು ಹಿರಿಯಣ್ಣನದರಂತೆಯೇ, ಆದರೆ ಕೆಂಪು ಭುಜದ ಗಂಟು ಮತ್ತು ಮರಿಗಳ ಅಧಿಕಾರಿಗಳ ಪದಕವು ಎಡದ ಜೇಬಿನ ಮುಚ್ಚಳದ ಮೇಲೆ ಕೆಂಪು ಬಟ್ಟೆಯ ಮೇಲೆ.

## ಹಿರಿಯಣ್ಣ (Cubmaster)

ಹೆಡ್‌ಕ್ವಾರ್ಟರ್ಸ್‌ನಿಂದ ಹಿರಿಯಣ್ಣನ ಸನ್ನದನ್ನು ಪಡೆದು ಯಾವ ಪ್ರದೇಶಕ್ಕೆ ಹಿರಿಯಣ್ಣನಾಗಬಹುದೆಂದು ಸನ್ನದು ಇರುವುದೋ ಆ ಪ್ರದೇಶದಲ್ಲಿ ಸ್ವತಂತ್ರವಾಗಿಯಾಗಲಿ ಇನ್ನೊಬ್ಬರ ಸಹಾಯದಿಂದಲಾಗಲಿ ರಿಜಿಸ್ಟರಾದ ಒಂದು ಗುಂಪಿನ ಅಧಿಕಾರವನ್ನು ನಡೆಸುತ್ತಿರುವವನು ಹಿರಿಯಣ್ಣನು. ಒಬ್ಬ ಹಿರಿಯಣ್ಣನು ಜಂಟಿಯಾಗಿಯಾಗಲಿ ಸ್ವತಂತ್ರನಾಗಿಯಾಗಲಿ ಗುಂಪಿನ ಕೆಲಸವನ್ನು ನೋಡುತ್ತಿದ್ದು ಅನಂತರ ಕೆಲಸವನ್ನು ಬಿಟ್ಟುಬಿಟ್ಟರೆ ಆತನ ಸನ್ನದು ಅಲ್ಲಿಗೆ ರದ್ದಾಗಿಹೋಗುತ್ತದೆ. ಆ ಸನ್ನದನ್ನು ಸರಿಯಾದ ರೀತಿಯಿಂದ ಹೆಡ್‌ಕ್ವಾರ್ಟರ್ಸ್‌ಗೆ ವಾಪಸ್ಸು ಮಾಡಬೇಕು.

ಹಿರಿಯಣ್ಣನ ಯೋಗ್ಯತೆಗಳು ಇವು :—

(ಅ) 'The Wolf-Cub's Handbook' ನ ಮತ್ತು ಈ ನಿಬಂಧನೆಗಳ ಪರಿಜ್ಞಾನವಿರಬೇಕು.

(ಆ) ಸ್ಕೌಟು ಶಿಕ್ಷಣದಲ್ಲಿ ಮುಖ್ಯಾಶಯವಾಗಿರುವ ಧರ್ಮನೀತಿಗಳ ಉದ್ದೇಶವನ್ನು ಚೆನ್ನಾಗಿ ಗ್ರಹಿಸಿರಬೇಕು.

(ಇ) ಹುಡುಗರಮೇಲೆ ಸತ್ಪರಿಣಾಮವಾಗುವಂತಹ ಶೀಲ ಸ್ವಭಾವ ನಡತೆಗಳನ್ನೂ ಗೌರವವನ್ನೂ ಪಡೆದು, ಕೆಲಸ ಕಾರ್ಯಗಳನ್ನು ಶ್ರದ್ಧೆಯಿಂದಲೂ ಮನಃಪೂರ್ವಕವಾಗಿಯೂ ಸಾಧಿಸುವ ನಿಷ್ಠೆಯನ್ನು ಪಡೆದಿರಬೇಕು.

(ಈ) ವಯಸ್ಸು ಹದಿನೆಂಟಕ್ಕೆ ಕಡಿಮೆ ಇರಕೂಡದು.

(ಉ) ಕ್ಲಾಸಿನ ಮೀಟಿಂಗುಗಳಿಗೆ ಬೇಕಾಗುವ ಒಂದು 'ಕ್ಲಬ್‌ರೂಂ' ಅನ್ನು ದೊರಕಿಸಿಕೊಳ್ಳುವ ಶಕ್ತಿ ಇರಬೇಕು.

(ಊ) ಹಿರಿಯಣ್ಣನ ಒಪ್ಪಿಗೆಯ ಶಿಕ್ಷಣವನ್ನು ಪಡೆದಿರಬೇಕು, ಅಥವಾ ಮೊದಲನೆ ತರಗತಿ ಸ್ಕೌಟು ಅಥವಾ ರೋವರ್ ಆಗಿ ಕಡೆಯ ಪಕ್ಷ ಮೂರು ತಿಂಗಳಾದರೂ ಕೆಲಸ ಮಾಡಿದ್ದರೆ ಡಿಸ್ಟ್ರಿಕ್ಟು ಸ್ಕೌಟು ಕಮೀಷನರ ಅನುಮತಿಯನ್ನು ಪಡೆದು ಆಗಬಹುದು.

(ಎ) ಒಂದು ಗುಂಪಿನಲ್ಲಿ ಉಮೇದುವಾರನಾಗಿ ಮೂರು ತಿಂಗಳು ಕೆಲಸ ಮಾಡಿರಬೇಕು.

ಅವರ ಸ್ಥಳಿಕ ಸಂಘದಿಂದ ಹಿರಿಯಣ್ಣಂದಿರು ನೇಮಿಸಲ್ಪಡುವರು, ಆದರೆ ಹೆಡ್‌ಕ್ವಾರ್ಟರ್ಸ್‌ನಿಂದ ಸನ್ನದನ್ನು ಪಡೆಯುವುದಕ್ಕೆ ಮೊದಲು ಆ ಸರಹದ್ದಿನಲ್ಲಿ ಒಬ್ಬರಿದ್ದರೆ ಡಿಸ್ಟ್ರಿಕ್ಟು ಸ್ಕೌಟು ಕಮೀಷನರಿಂದ ಅಂಗೀಕೃತವಾಗಬೇಕು. ಸ್ಥಳಿಕ ಸಂಘಗಳು ಇಲ್ಲದ ಕಡೆಗಳಲ್ಲಿ ಅಲ್ಲಿಯ ಮೂವರು

ಸಭ್ಯರಿಂದ, ನಡತೆ ಶೀಲ ಸ್ವಭಾವಗಳು ಒಳ್ಳೆಯವೆಂದು ಯೋಗ್ಯತಾ ಪತ್ರವನ್ನು ಕಳುಹಿಸಬೇಕು.

ಈ ಹುದ್ದೆಗೆ ಸ್ತ್ರೀಯರು ಯೋಗ್ಯರು.

ಗುಂಪು ಯಾವುದಾದರೂ ಒಂದು ದಳಕ್ಕೆ ಸೇರಿದ್ದರೆ ದಳಪತಿಯೇ ಎಲ್ಲಾ ಮೇಲ್ವಿಚಾರಣೆಗಳನ್ನು ನೋಡಿಕೊಂಡರೂ ಗುಂಪಿನ ಯೋಗಕ್ಷೇಮಗಳನ್ನು ಮಾತ್ರ ಹಿರಿಯಣ್ಣನಿಗೇ ಬಿಟ್ಟು ಬಿಡಬೇಕು.

ಸಮರೂಪ—ಪ್ರದರ್ಶನಗಳಲ್ಲಿ ದಳಪತಿಯದರಂತೆಯೇ, ಆದರೆ ಎಡದ ಜೇಬಿನಮೇಲೆ ಹಸುರು ಬಟ್ಟೆಯ ಮೇಲೆ ಹಿರಿಯಣ್ಣನ ಪದಕದೊಂದಿಗೆ. ಶಿಬಿರಗಳು, ಆಟಗಳು ಇತ್ಯಾದಿಗಳಿಗೆ ಮರಿಗಳದರಂತೆಯೇ, ಆದರೆ ಎಡದ ಭುಜದಮೇಲೆ ಬಿಳಿಯ ಭುಜದ ಗಂಟು ಮತ್ತು ಹಿರಿಯಣ್ಣನ ಪದಕದಿಂದ.

## ಮರಿಗಳ ಸಹಾಯಕ ಡಿಸ್ಟ್ರಿಕ್ಟ್ ಕಮೀಷನರು (Assistant District Commissioner for Cubs)

ಡಿಸ್ಟ್ರಿಕ್ಟ್ ಸ್ಕೌಟು ಕಮೀಷನರ ಹೇಳಿಕೆಯಮೇಲೆ, ಹೆಡ್‌ಕ್ವಾರ್ಟರ್ಸ್‌ನವರು ಒಬ್ಬ ಹಿರಿಯಣ್ಣನನ್ನಾಗಲಿ ಅಥವಾ ಇನ್ಯಾರಾದರೂ ಸರಿಯಾದವರನ್ನು ಎಂದರೆ ಕೂಟಗಳಲ್ಲಿ ಆಜ್ಞೆಮಾಡುವುದು ಅಥವಾ ನಿಯಮಗಳಿಗೆ ಸಂಬಂಧಪಟ್ಟ ಇನ್ನಾವುದಾದರೂ ಕೆಲಸಗಳನ್ನು ಮಾಡಲು ಸಮರ್ಥನಾಗಿರುವವನನ್ನು ನೇಮಕಮಾಡಬಹುದು.

ಸಮರೂಪ—ಹಿರಿಯಣ್ಣನದರಂತೆಯೇ, ಭುಜದ ಗಂಟು ವಿನಃ, ಆದರೆ ಬಿಳಿಯ ಬಟ್ಟೆಯಮೇಲೆ ಹಿರಿಯಣ್ಣನ ಪದಕದೊಂದಿಗೆ.

## ಪ್ರವೀಣತೆಯ ಪದಕಗಳು (Proficiency Badges)

ಮರಿಯು ಪ್ರವೀಣತೆಯ ಪದಕಗಳಿಗೆ ತಯಾರಾಗುವುದಕ್ಕೆ ಮೊದಲು ಎರಡು ತಾರೆ ಮರಿಯಾಗಿರಬೇಕು.

ಎರಡು ತಾರೆ ಮರಿಯು ತಯಾರಾಗಬಹುದಾದ ಹನ್ನೆರಡು ಪ್ರವೀಣತೆಯ ಪದಕಗಳು ಈ ಕೆಳಕಂಡ ರೀತಿಯಲ್ಲಿ ನಾಲ್ಕು ಸಮೂಹಗಳಾಗಿ ವಿಂಗಡಿಸಲ್ಪಟ್ಟಿವೆ :—

| | | |
|---|---|---|
| ಸಮೂಹ | ೧—ಶೀಲ | (ಪದಕಗಳ ಬಣ್ಣ ನೀಲಿ) |
| ,, | ೨—ಕೈ ಕೆಲಸ | (................ ಹಳದಿ) |
| ,, | ೩—ಸೇವೆ | (................ ಕೆಂಪು) |
| ,, | ೪—ದೇಹಾರೋಗ್ಯ | (................ ಹಸರು) |

ಈ ಪದಕಗಳನ್ನು ಬಲತೋಳಿನ ಮೇಲೆ ಭುಜಕ್ಕೂ ಮೊಳಕೈಗೂ ಮಧ್ಯೆ ಸಾಲು ಸಾಲಾಗಿ ಧರಿಸಬೇಕು.

ಸ್ಥಳಿಕ ಸಂಘದಿಂದ ಮೆಚ್ಚುಗೆಯನ್ನು ಪಡೆದ ಒಬ್ಬ ಪ್ರತ್ಯೇಕ ಪರೀಕ್ಷಕರ ಸಮುಖದಲ್ಲಾದರೂ ಪರೀಕ್ಷೆಯಲ್ಲಿ ಉತ್ತೀರ್ಣನಾಗಬೇಕು.

## ಸಮೂಹ I

ಮರಿಯು ಒಂದನೇ ಸಮೂಹದಲ್ಲಿ ಯಾವ ಪದಕವನ್ನಾದರೂ ಪಡೆಯುವ ಮೊದಲು ಈ ಭಾಷೆ ಕೊಡಬೇಕು :—

> "ಪದಕವನ್ನು ಪಡೆದಮೇಲೆ ನಾನು ಇದೇ ರೀತಿಯಾಗಿ ಅಭ್ಯಾಸಮಾಡುತ್ತಲೆ (ನಿರೀಕ್ಷಣೆಮಾಡುತ್ತಲೆ ಅಥವಾ ಕೂಡಿಡುತ್ತಲೆ) ಇರಲು ಕೈಲಾದಮಟ್ಟಿಗೂ ಪ್ರಯತ್ನಿಸುತ್ತಿರುತ್ತೇನೆ".

### ಸಂಗ್ರಾಹಕ (Collector)

ಅಂಚೆ ಚೀಟಿಗಳು, ಸಸ್ಯಶಾಸ್ತ್ರ, ಭೂಗರ್ಭಶಾಸ್ತ್ರದ ಮಾದರಿಗಳು,



ಚಿತ್ರಪಠಗಳು, ಪದಕಗಳ ಪಟ್ಟಿಗಳು, ಚಿತ್ರದ ಕಾರ್ಡುಗಳು ಅಥವಾ ಟಪಾಲಿನ ಮುದ್ರೆಗಳು, ಇವೇ ಮೊದಲಾದುವುಗಳಲ್ಲಿ ಯಾವುದಾದರೊಂದನ್ನು ಸಂಗ್ರಹಿಸಿ ಅವುಗಳನ್ನು ಅನುಕ್ರಮವಾಗಿಯೂ, ಸುಂದರ

ವಾಗಿಯೂ, ಒಂದು ಪುಸ್ತಕದಲ್ಲಿ ಅಂಟುಹಾಕಿ ಅವುಗಳ ಹೆಸರುಗಳನ್ನು ಲಕ್ಷಣವಾಗಿ ಬರೆದಿಡಬೇಕು.

ಬದಲಾಗಿ.—ವರ್ತಮಾನ ಪತ್ರಿಕೆಗಳ ತುಣುಕುಗಳನ್ನು ಕೂಡಿಸಿ ಅವುಗಳನ್ನು ಒಂದು ಪುಸ್ತಕ (Scrap-book) ದಲ್ಲಿ ಅಂಟುಹಾಕಿ ಇಟ್ಟುಕೊಂಡಿರಬೇಕು.

## ನಿರೀಕ್ಷಕ (Observer)

ಹಿಂದೂದೇಶದ ಐದು ಕಾಡುಮೃಗಗಳ ಅಥವಾ ಪಕ್ಷಿಗಳ ಜೀವನ ಚರಿತ್ರೆ ಅಥವಾ ಹಿಂದೂದೇಶದ ಇಪ್ಪತ್ತು ಮರಗಳ ಅಥವಾ ಹೂಗಳ ಹೆಸರು ಮತ್ತು ರೂಪಗಳು ಗೊತ್ತಿರಬೇಕು ; ಮತ್ತು ಯಾವ ಯಾವ ಗಿಡಗಳು, ಕಾಯಿಗಳು, ಬೀಜಗಳು, ಪ್ರಾಣಿಗಳಿಗೂ ಮನುಷ್ಯರಿಗೂ ವಿಷಮಯವಾಗಿರುತ್ತವೆ ಎಂಬುದು ತಿಳಿದಿರಬೇಕು.



ಯಾವ ಯಾವ ಕಾಲದಲ್ಲಿ ಎಂತೆಂತಹ ಹಣ್ಣುಗಳು, ಕಾಯಿಪಲ್ಯಗಳು ಸಿಕ್ಕುತ್ತವೆ ಎಂಬುದನ್ನೂ, ಅವುಗಳ ಅಂದಾಜು ಬೆಲೆಗಳನ್ನೂ ತಿಳಿದಿರಬೇಕು.

ನಿಯಮಿತ ದಾರಿಯೊಂದನ್ನು ಅನುಕರಿಸಿ (ಚಿನ್ಹೆಗಳಿಂದಾಗಲಿ, ದಿಕ್ಕುಗಳ ಜ್ಞಾನದಿಂದಾಗಲಿ, ದಾರಿತೋರಕ ಸ್ಕೌಟು ಸಂಕೇತಗಳಿಂದಾಗಲಿ) ಅರ್ಧ ಮೈಲಿಯಾದರೂ ಹೋಗಲು ಸಮರ್ಥನಾಗಿರಬೇಕು.

ನಿರೀಕ್ಷಕನ ಶಕ್ತಿಯ ಆಟವನ್ನಾಗಲಿ, 'ಅಂಗಡಿ-ಕಿಟಿಕಿ' ಆಟವನ್ನಾಗಲಿ ಆಡುವುದಕ್ಕೆ ಬರಬೇಕು. (ಇಪ್ಪತ್ತನಾಲ್ಕು ವಸ್ತುಗಳಲ್ಲಿ ಹದಿನಾರನ್ನಾದರೂ ಜ್ಞಾಪಕದಲ್ಲಿಟ್ಟುಕೊಳ್ಳುವ ಶಕ್ತಿ ಇರಬೇಕು.)

ನಿರೀಕ್ಷಕನು ವಿಶೇಷ ಭಾಷೆ ಕೊಡಬೇಕು :—

"ನಾನು ಮನುಷ್ಯರಿಗೆ ಹೇಗೋ ಹಾಗೆಯೇ ಪ್ರಾಣಿಗಳಿಗೂ ಸತ್ಕೃತ್ಯಗಳನ್ನು ಮಾಡುತ್ತೇನೆಂದು ಭಾಷೆ ಕೊಡುತ್ತೇನೆ".

**ಸಂಕೇತಗಾರ (Signaller)**

ಆರಂಭವನ್ನು ಸೂಚಿಸುವ ಸಂಕೇತ, 'ತಿಳಿಯಿತು' ಎಂದು ಸೂಚಿ



ಸುವ ಚಿನ್ಹೆ, ಸುದ್ದಿಯ ಅವಚಿನ್ಹೆ, ಅದಕ್ಕೆ ಉತ್ತರ, ವರ್ತಮಾನದ ಕೊನೆ ಮತ್ತು ಅದಕ್ಕೆ ಉತ್ತರ, ಅಂಕಿಗಳನ್ನು ಕಳುಹಿಸುವ ರೀತಿ ಮತ್ತು ಅಳಿಸು ಎಂದು ಹೇಳುವುದಕ್ಕೆ ಸಂಕೇತಗಳೆಲ್ಲವೂ ಬಂದಿರಬೇಕು.

ಕೈ ಮರದ ಕ್ರಮದಲ್ಲಿ ಸುಲಭವಾದ ಪದಗಳನ್ನು ಸಾವಕಾಶವಾದರೂ ತಪ್ಪಿಲ್ಲದೆ ಕಳುಹಿಸುವುದು ಮತ್ತು ಕಳುಹಿಸಿದ್ದನ್ನು ಓದುವುದು. ಬಯಲು ಪ್ರದೇಶಗಳಲ್ಲಿ ಉಪಯೋಗಿಸಬಹುದಾದ ಸಂಕೇತಗಳನ್ನು ಅಭ್ಯಾಸತಃ ರೂಢಿಯಲ್ಲಿ ತಂದುಕೊಳ್ಳಬೇಕು. ಉದಾ :—ಹೊಗೆಯ, (ಕೈ ಅಥವಾ ದಂಡ) ಚಲನೆಯ ಮತ್ತು ಗುರುತುಗಳ ಸನ್ನೆಗಳು ಬಂದಿರಬೇಕು.

## ಸಮೂಹ II

ಮರಿಯು ಎರಡನೇ ಸಮೂಹದಲ್ಲಿ ಯಾವ ಪದಕವನ್ನಾದರೂ ಪಡೆಯುವ ಮೊದಲು ಈ ಭಾಷೆ ಕೊಡಬೇಕು :—

"ನನ್ನ ಪ್ರಯತ್ನವು ಮೊದಲಿನಲ್ಲಿ ಸಫಲವಾಗದಿದ್ದರೆ ಆಗುವವರೆಗೂ ಪುನಃ ಪುನಃ ಪ್ರಯತ್ನ ಪಡುತ್ತೇನೆ."

**ಚಿತ್ರಗಾರ (Artist)**

ಮರಿಗೆ ಸೀಸದಕಡ್ಡಿ ಮತ್ತು ಶಾಯಿ ಅಥವಾ ಬರಿಯ ಸೀಸದ



ಕಡ್ಡಿಯಲ್ಲಿ ಒಂದು ಪ್ರಾಣಿ ಅಥವಾ ಮನುಷ್ಯ ಅಥವಾ ಒಂದು ಚಿತ್ರವನ್ನು ನೋಡಿಕೊಂಡು ಬರೆಯುವುದಕ್ಕೆ ಬಂದಿರಬೇಕು.

ಸೀಸದಕಡ್ಡಿ, ಬ್ರಷ್, ಲೇಖನಿ ಅಥವಾ ಬಣ್ಣ

ಗಳಿಂದ ಒಂದು ಚಿಕ್ಕ ಸಾಮಾನ್ಯ ಕಥೆಯ ಪಾತ್ರನನ್ನೋ ಅಥವಾ ಯಾವ ದಾದರೊಂದು ಸಂದರ್ಭವನ್ನೋ, ಅಥವಾ ಚರಿತ್ರೆಯ ಅಥವಾ ಯುದ್ಧದ ಸಂದರ್ಭವನ್ನೋ ವರ್ಣಿಸತಕ್ಕ ಒಂದು ಚಿತ್ರವನ್ನು ಬರೆಯಬೇಕು: (ಆಕಾರ ೭×೫ ಅಂಗುಲಗಳಿಗಿಂತ ಚಿಕ್ಕದಾಗಿರಕೂಡದು;) ಅಥವಾ ಪ್ರಕೃತಿ ಯಿಂದಾಗಲಿ ಸ್ಥಳ ನಿರೂಪವಾಗಲಿ ಇಲ್ಲವೆ ಯಾವುದಾದರೊಂದು ಕೆಲವು ವಸ್ತುಸಂಗ್ರಹಗಳ ಚಿತ್ರವನ್ನು ಬರೆಯಬೇಕು.

ಬದಲಾಗಿ.—ಮಣ್ಣು, ಮೇಣ ಅಥವಾ ಮರ ಇತ್ಯಾದಿಗಳಿಂದ ಪರೀಕ್ಷಕನು ಗುರ್ತಿಸಲಾಗುವಂತಹ ಒಂದು ಮನುಷ್ಯಾಕೃತಿ, ಒಂದು ಪ್ರಾಣಿ ಅಥವಾ ಪಕ್ಷಿ (೭ ಅಂಗುಲಗಳಿಗಿಂತ ಹೆಚ್ಚು ಎತ್ತರವಿರಬಾರದು) ಮತ್ತು ಗೃಹಕೃತ್ಯದಲ್ಲಿ ಉಪಯೋಗವಾಗತಕ್ಕ ಮೂರು ವಸ್ತುಗಳ ಮಾದರಿಗಳನ್ನು ಮಾಡಬೇಕು.

ಸೂಚನೆ.—ಮರಿಗಳಿಗೆ ಯಾವ ಯಾವ ಕೆಲಸಗಳಲ್ಲಿ ಹೆಚ್ಚು ಆಸಕ್ತಿಯಿರುತ್ತದೆಯೋ ಅದನ್ನೇ ಚೆನ್ನಾಗಿ ವೃದ್ಧಿಗೊಳಿಸಬೇಕು ಮತ್ತು ಕೆಲಸದಲ್ಲಿ ಸಾಧ್ಯವಾದಷ್ಟು ಮಟ್ಟಿಗೆ ನಿಯಮಗಳಿಗೆ ಅನುಸರಿಸಿ ನಡೆಯುವಂತೆ ಆಸಕ್ತಿಯನ್ನು ಹುಟ್ಟಿಸಬೇಕು.

## ನೆಯ್ಗೆಯುವ (Weaver)

ಮರಿಯು ನೆಯ್ಗೆಯುವನ ಪದಕವನ್ನು ಪಡೆಯುವ ಮೊದಲು ಇವು ಗಳಲ್ಲಿ ಯಾವುದಾದರೂ ನಾಲ್ಕರಲ್ಲಿ ಉತ್ತೀರ್ಣನಾಗಬೇಕು:—

೧. ಒಂದು ಚಿಕ್ಕ ಹುಲ್ಲಿನ ಚಾಪೆ ಅಥವಾ ಕಸೂತಿಯಿಂದ ಒಂದು ಉಣ್ಣೆಯ ಕೊರಳುಪಟ್ಟಿಯನ್ನು ಮಾಡುವುದು.



೨. ದಾರದ ಹೆಣಿಗೆಯ ಕೆಲಸದಿಂದ ಒಂದು ಚೀಲವನ್ನೊ, ಬಲೆಯನ್ನೊ, ಚಿಕ್ಕ ತೂಗುವ ಮಂಚವನ್ನೊ ತಯಾರಿಸುವುದು; ಅಥವಾ ಕಡೇಪಕ್ಷ ಇಪ್ಪತ್ತು ಗಜ ಹತ್ತಿಯ ನೂಲನ್ನು ನೂಲುವುದು.

೩. ಒಂದು ಮಂಚದ ಚೌಕಟ್ಟಿನಮೇಲೆ ನವಾರವನ್ನು ಸರಿಯಾಗಿ ಜಾಳಿಗೆಯಂತೆ ನೇಯುವುದು ಅಥವಾ ಕುರ್ಚಿಯ ಆಸನಕ್ಕೆ ಬೆತ್ತವನ್ನು ಹೆಣೆಯುವುದು ಅಥವಾ ಕ್ಯಾನ್‌ವಾಸ್ ಬಟ್ಟೆಯಮೇಲೆ ಅಡ್ಡಲಾಗಿ ಹೊಲಿದು ಒಂದು ' ಕೆಟಲ್-ಹೋಲ್ಡರ್ ' ಅನ್ನು ಮಾಡುವುದು.

೪. ಒಂದು ಚಿಕ್ಕ ತಟ್ಟೆಯನ್ನು ಮಾಡುವುದು ಅಥವಾ ತೆಂಗಿನ ಗರಿಗಳನ್ನು ಝೋಪಡಿಯ ಛಾವಣಿಗಾಗುವಂತಹ ಚಾಪೆಗಳನ್ನು ಹೆಣೆಯುವುದು ಅಥವಾ ಕ್ಯಾನ್‌ವಾಸ್ ಬಟ್ಟೆಯ ಮೇಲೆ ಉಣ್ಣೆಯಿಂದಾಗಲಿ ಬಟ್ಟೆಯ ಚೂರುಗಳಿಂದಾಗಲಿ ಒಂದು ರತ್ನಗಂಬಳಿಯನ್ನು ನೇಯುವುದು.

೫. ಒಂದು ಸಣ್ಣ ' ರಜಾಯಿ 'ಯನ್ನು ತರಿಯಾಸಿ ಅದನ್ನು ಹತ್ತಿಯಿಂದಾಗಲಿ ಶೆಣಬಿನಿಂದಾಗಲಿ ತುಂಬುವುದು ಅಥವಾ ಬಟ್ಟೆ ಚಿಂದಿಗಳನ್ನು ಹೊಲಿದು ಒಂದು ಸುಪ್ಪತ್ತಿಗೆಯನ್ನೊ ಅಥವಾ ಮೇಜಿನ ಬಟ್ಟೆಯನ್ನೊ ಮಾಡುವುದು.

೬. ಹತ್ತಿ, ಬೆತ್ತ, ಜೊಂಡು, ಹುಲ್ಲು ಅಥವಾ ಬಿದುರಿನಿಂದ ಯಾವುದಾದರೊಂದು ಉಪಯೋಗವಾದ ಸಾಮಾನನ್ನು ತಯಾರಿಸುವುದು.

೭. ಒಂದು ಕುಕ್ಕೆಯನ್ನೂ ಮತ್ತು ಕಸದ ಬರಲನ್ನೂ ಮಾಡುವುದು.

## ಬಡಗಿ (**Woodworker**)

ಕೆತ್ತನೆಯ ಕೆಲಸ :—ಈ ಕೆಳಗೆ ಕಂಡ ವಸ್ತುಗಳಲ್ಲಿ ಎರಡನ್ನು ಕೆತ್ತನೆ ಮಾಡಬೇಕು :—ಪೆಟ್ಟಿಗೆ, ಚಹಾ ಪಾತ್ರೆಯ ಪೀಠ, ಕಾಲುಮಣೆ, ಕಾರ್ಡಿನಪೀಠ, ಚಹಾ ಕಪ್ ಬಸಿಗಳನ್ನು ಇಡುವ ತಟ್ಟೆ ಮತ್ತು ತನಗೇ ತೋಚಿದ ಬೇರೆ ಯಾವುದಾದರೊಂದು.



ಆಯುಧಗಳ ಎಚ್ಚರಿಕೆಯನ್ನು ತೆಗೆದುಕೊಳ್ಳುವುದನ್ನೂ ಅವುಗಳನ್ನು ಹರಿತಮಾಡುವುದನ್ನೂ ತಿಳಿದುಕೊಂಡಿರಬೇಕು.

ಮರದಲ್ಲಿ ಕೆತ್ತನೆಯ ಕೆಲಸಮಾಡುವುದಕ್ಕೆ ಯೋಗ್ಯವಾದ ಸುಲಭ ಚಿತ್ರಗಳನ್ನು ಬರೆಯುವುದಕ್ಕೆ ಬರುವುದಲ್ಲದೆ, ಅಂತಹ ಚಿತ್ರಗಳನ್ನು ಮರದ ಮೇಲೆ ಎತ್ತುವ ವಿಧಾನವನ್ನೂ ತಿಳಿದುಕೊಂಡಿರಬೇಕು.

ಮರವನ್ನು ಕೊರೆಯುವ ಕೆಲಸ (ಬದಲಾಗಿ) :—ಈ ಕೆಳಗೆ ಕಂಡ ವಸ್ತುಗಳಲ್ಲಿ ನಾಲ್ಕನ್ನು ಮಾಡಬೇಕು :—ಗೋಡೆಯಮೇಲೆ ತೂಗು ಹಾಕಿ ಪುಸ್ತಕಗಳನ್ನಿಡತಕ್ಕ ಗೂಡು, ಪೆಟ್ಟಿಗೆ, ಕೈಗನ್ನಡಿ, ಕಾಗದವನ್ನು ಹರಿಯುವ ಚಾಕು, ಗಡಿಯಾರದ ಪೀಠ ಮತ್ತು ತನಗೇ ತೋಚಿದ ಬೇರೆ ಯಾವುದಾದರೊಂದು.

ಮರಗೆಲಸ (ಬದಲಾಗಿ) :—ಈ ಕೆಳಗೆ ಕಂಡ ಮರಗಳಲ್ಲಿ ನಾಲ್ಕನ್ನಾದರೂ ಗುರ್ತಿಸಲು ಸಮರ್ಥನಾಗಿರಬೇಕು :—ಮಾವು, ತೇಗ, ಹಲಸು, ಮಹೋಗನಿ, ಪೈನ್.

ಮರಗೆಲಸದಲ್ಲಿ ಎಲ್ಲಾ ತರದ ಕಟ್ಟುಗಳನ್ನೂ, ಅವುಗಳ ಉಪಯೋಗಗಳನ್ನೂ ತಿಳಿದುಕೊಂಡಿರಬೇಕು ಮತ್ತು ಅವುಗಳಲ್ಲಿ ಎರಡನ್ನು ಸರಿಯಾದ ರೀತಿಯಿಂದ ಮಾಡಿ ತೋರಿಸಬೇಕು.

ಈ ಕೆಳಗೆ ಕಂಡ ವಸ್ತುಗಳಲ್ಲಿ ನಾಲ್ಕನ್ನು ಮಾಡಬೇಕು :—ಕಾಲುಮಣೆ, ಪೆಟ್ಟಿಗೆ, ಲೇಖನಿಯನ್ನಿಡುವ ತಾಟು, ಕಾಗದವನ್ನು ಹರಿಯುವ ಚಾಕು, ಗಡಿಯಾರದ ಪೀಠ, ಗೋಡೆಯಮೇಲೆ ಹಾಕತಕ್ಕ ಪೀಠ ಮತ್ತು ತನಗೇ ತೋಚಿದ ಬೇರೆ ಯಾವುದಾದರೊಂದು.

ಗರಗಸ, ಸುತ್ತಿಗೆ, ತೋಪಡ ಮತ್ತು ಉಳಿ ಇವುಗಳನ್ನು ಸರಿಯಾಗಿ ಉಪಯೋಗಿಸುವುದಕ್ಕೆ ಬರಬೇಕು ಮತ್ತು ಕಡೆಯದನ್ನು ಹರಿತಮಾಡಲು ಸಮರ್ಥನಾಗಿರಬೇಕು.

ಮರಿಯು ಮೇಲೆ ಹೇಳಿದ ಪರೀಕ್ಷೆಯ ಎರಡು ಮತ್ತು ಮೂರನೇ ಭಾಗಗಳಲ್ಲಿನ ಜ್ಞಾನವನ್ನು ತೋರಿಸುವ ಯಾವುದಾದರೊಂದು ಚಿಕ್ಕ ಪದಾರ್ಥವನ್ನು ಮಾಡಿ ಪ್ರದರ್ಶಿಸಿದರೆ ಅವನನ್ನು ಒಂದನೇ ಭಾಗದಲ್ಲಿ ಮಾತ್ರ ಪರೀಕ್ಷಿಸಬೇಕು.

## ಸಮೂಹ III

ಮರಿಯು ಮೂರನೇ ಸಮೂಹದಲ್ಲಿ ಯಾವ ಪದಕವನ್ನಾದರೂ ಪಡೆಯುವ ಮೊದಲು ಈ ಭಾಷೆ ಕೊಡಬೇಕು:—

"ನಾನು ಕೈಲಾದ ಮಟ್ಟಿಗೂ ಇತರರಿಗೆ ಸಹಾಯಮಾಡಲು ಪ್ರಯತ್ನಿಸುತ್ತೇನೆ."

### ಪ್ರಥಮ ಚಿಕಿತ್ಸಕ (First Aider)

ಕೈಯಿಂದ ಹರಿಯುತ್ತಿರುವ ರಕ್ತಸ್ರಾವಕ್ಕೆ ಬಟ್ಟೆಯನ್ನು ಕಟ್ಟಿ ನಿಲ್ಲಿಸಲು ಬರಬೇಕು; ಮತ್ತು ಸಾಧ್ಯವಾದಷ್ಟು ಮಟ್ಟಿಗೂ ವಿಷಮವಾಗದಂತೆ ಜಾಗರೂಕತೆಯಿಂದಿರಬೇಕು; ಮತ್ತು ಬಿದ್ದು ತರಚಿದ ಗಾಯವನ್ನು ಸ್ವಚ್ಛವಾಗಿ ತೊಳೆದು ಅದಕ್ಕೆ ಚಿಕಿತ್ಸೆಯನ್ನು ತಿಳಿದುಕೊಂಡಿರಬೇಕು.



ಉಳುಕುಗಳಿಗೆ ಚಿಕಿತ್ಸೆಯು ತಿಳಿದಿರಬೇಕು; ಮತ್ತು ಉಳುಕಿದ ಕಾಲಿಗೆ ಅಗಲವಾದ ಗಾಯದಪಟ್ಟಿಯನ್ನು ಕಟ್ಟಲು ಬರಬೇಕು. ತೋಳಿನ ದೊಡ್ಡ ಜೋಳಿಗೆಯನ್ನು ಹಾಕುವುದಕ್ಕೂ ತಲೆಯ ಗಾಯದ ಪಟ್ಟಿಯನ್ನು ಕಟ್ಟುವುದಕ್ಕೂ ಗೊತ್ತಿರಬೇಕು.

ಮೂಗಿನಿಂದ ರಕ್ತಸುರಿಯುವುದನ್ನು ನಿಲ್ಲಿಸಲು ತಿಳಿದಿರಬೇಕು;

ಬೆಂಕಿಹತ್ತಿರುವ ಬಟ್ಟೆಗಳನ್ನು ಹೇಗೆ ಆರಿಸಬೇಕೆಂಬುದನ್ನೂ ಮತ್ತು ಸಣ್ಣ ಸಣ್ಣ ಸುಟ್ಟಗಾಯಗಳಿಗೆ ಯಾವ ರೀತಿ ಚಿಕಿತ್ಸೆ ಮಾಡಬೇಕೆಂಬು

ದನ್ನೂ ಅರಿತಿರಬೇಕು. ಕಣ್ಣಿನಲ್ಲಿ ಬಿದ್ದ ಧೂಳನ್ನು ತೆಗೆಯುವುದು ; ಉಸಿರು ಸಿಕ್ಕಿಕೊಳ್ಳುವುದು ; ಬಿಸಲಿನ ತಾಪದಿಂದ ಪ್ರಜ್ಞಾಶೂನ್ಯತೆ ; ಮತ್ತು ಹಾವು ನಾಯಿ, ಮತ್ತು ಕ್ರಿಮಿಗಳ ಕಡಿತಗಳು ಇವುಗಳಿಗೆಲ್ಲಾ ಮಾಡತಕ್ಕ ಚಿಕಿತ್ಸೆ ಗಳೂ ಗೊತ್ತಿರಬೇಕು.

## ಮಾರ್ಗದರ್ಶಿ (Guide)

ಅತ್ಯಂತ ಹತ್ತಿರವಿರುವ ದೊಡ್ಡ ನಗರಕ್ಕೆ ಹೋಗುವ ದಾರಿಯನ್ನೂ



ಮತ್ತು ಎಷ್ಟು ದೂರವಿದೆ ಎಂಬುದನ್ನೂ ಮತ್ತು ಸುತ್ತಮುತ್ತಲಿನ ಮೂರು ಪಟ್ಟಣಗಳು ಅಥವಾ ದೊಡ್ಡ ಹಳ್ಳಿಗಳ ದಿಕ್ಕುಗಳು ಮತ್ತು ದೂರಗಳನ್ನೂ ತಿಳಿದುಕೊಂಡಿರಬೇಕು. (ಮೇಲಿನ ಪರೀಕ್ಷೆಗಳಲ್ಲಿನ ದೂರವು ಗುಂಪಿನ 'ಕ್ಲಬ್‌ರೂಂ'ನಿಂದ ಗಣನೆ ಮಾಡತಕ್ಕದ್ದು.)

ಪರಸ್ಥಳದವರಿಗೆ ದಾರಿಯನ್ನು ತೋರಿಸುವಾಗ ಅವರಿಗೆ ತಿಳಿಯು ವಂತೆಯೂ ವಿಶದವಾಗಿಯೂ ಹೇಳಬೇಕು ; ಮತ್ತು ಹಾಗೆ ಹೇಳುವುದರಲ್ಲಿ ಚುರುಕೂ ವಿನಯವೂ ಇರಬೇಕು.

ಒಂದು ಚಿಕ್ಕ ವರ್ತಮಾನವನ್ನು ತಪ್ಪಿಲ್ಲದೆ ಬಾಯಿಮಾತಿನಿಂದಲೇ ತಲುಪಿಸಬೇಕು.

ಅತ್ಯಂತ ಸಮೀಪದಲ್ಲಿರುವ ಪೋಲೀಸ್ ಠಾಣೆ, ಬೆಂಕಿಯನ್ನಾರಿಸುವ ಯಂತ್ರವಿರುವ ಸ್ಥಳ, ವೈದ್ಯರಮನೆ, ಔಷಧಾಲಯ, ದೇವಸ್ಥಾನ, ಚರ್ಚು, ಮಶೀದಿ, ಆಸ್ಪತ್ರೆ, ಕಮ್ಮಾರನ ಕುಲುಮೆ, ಮೋಟಾರಿನ ನಿಲ್ದಾಣ ಮತ್ತು ಹೊಟೇಲುಗಳು ಇರುವ ದೂರ ಮತ್ತು ನಾನಾ ತೆರದ ಸಾಮಾನುಗಳು ಸಿಕ್ಕುವ ಒಳ್ಳೆಯ ಅಂಗಡಿಗಳ ಹೆಸರುಗಳು ಮತ್ತು ಅವುಗಳ ವಿಚಾರಗಳನ್ನೂ ತಿಳಿದುಕೊಂಡಿರಬೇಕು.

ಗುಂಪಿನ 'ಕ್ಲಬ್ ರೂಂ'ನಿಂದ ಸುತ್ತಲೂ ಅರ್ಧಮೈಲಿ ಅಂತರ ದಲ್ಲಿರುವ ಎಲ್ಲಾ ಅಡ್ಡದಾರಿಗಳೂ ಗೊತ್ತಿರಬೇಕು.

ಅಂತರಗಳನ್ನು ಸುಮಾರಾಗಿ ಅಂದಾಜು ಹಾಕುವುದಕ್ಕೆ ಸಮರ್ಥನಾಗಿರಬೇಕು (ಉದಾ :—ಜನರಿಗೆ ಮಾರ್ಗವನ್ನು ತೋರಿಸುವಾಗ.)

ಸುತ್ತುಮುತ್ತಲಿನಲ್ಲಿರುವ ಯಾವುದಾದರೊಂದು ಚರಿತ್ರಾರ್ಹ ಸ್ಥಳದ ಚರಿತ್ರೆಯನ್ನು ತಿಳಿದವನಾಗಿರಬೇಕು.

(ದೊಡ್ಡ ಪಟ್ಟಣಗಳಲ್ಲಿ ಕಮೀಷನರುಗಳು ೧, ೪ ಮತ್ತು ೫ನೆಯ ಪ್ಯಾರಾಗಳಲ್ಲಿ ನ್ಯಾಯವಾದ ಬದಲಾವಣೆಗಳನ್ನು ಮಾಡಬಹುದು.)

**ಪರಿಚಾರಕ (House Orderly)**

ಒಂದು ಕೊಠಡಿಯನ್ನು ಶುಚಿಯಾಗಿಯೂ ಅಂದವಾಗಿಯೂ ಮಾಡಲೂ ಮತ್ತು ಎರಡು ಬೆಂಕಿಕಡ್ಡಿಗಳಿಗಿಂತ ಹೆಚ್ಚಿಲ್ಲದೆ ಬೆಂಕಿಯನ್ನು ಹತ್ತಿಸಲೂ ಸಮರ್ಥನಾಗಿರಬೇಕು.

ಚಪಾತಿ ಅಥವಾ ಉಪ್ಪಿಟ್ಟನ್ನು ಮಾಡುವುದು, ಅನ್ನವನ್ನೂ ಒಂದು ಹುಳಿಯನ್ನೂ ಪಲ್ಯವನ್ನೂ ಬೇಯಿಸುವುದು ಅಥವಾ ಚೆನ್ನಾಗಿ ಒಂದು ಲೋಟ ಚಹವನ್ನು ಕಾಯಿಸುವುದು ಮತ್ತು ಒಂದು ಚೂರು ರೊಟ್ಟಿಯನ್ನು ಸುಡುವುದು ಬಂದಿರಬೇಕು.

ಆಲೂಗಡ್ಡೆಗಳ ಸಿಪ್ಪೆಯನ್ನು ಸುಲಿಯುವುದು, ಅವನ್ನು ಕುದಿಸುವುದು ಮತ್ತು ಹಸರು ಕಾಯಿಪಲ್ಯಗಳನ್ನು ಬೇಯಿಸುವ ವಿಧಾನವನ್ನು ಕಲಿತಿರಬೇಕು.

ಅಡಿಗೆ ಪಾತ್ರೆ ಮೊದಲಾದುವುಗಳನ್ನು ತೊಳೆಯಬೇಕು.

ಚಾಕುಗಳು ಮತ್ತು ಹಿತ್ತಾಳೆಯ ಸಾಮಾನುಗಳನ್ನು ಶುದ್ಧಿಮಾಡಬೇಕು.

# ಸಮೂಹ IV

ಮರಿಯು ನಾಲ್ಕನೇ ಸಮೂಹದಲ್ಲಿ ಯಾವ ಪದಕವನ್ನಾದರೂ ಪಡೆಯುವ ಮೊದಲು ಈ ಭಾಷೆ ಕೊಡಬೇಕು :—

"ನಾನು ಕೈಲಾದಮಟ್ಟಿಗೂ ಶರೀರ ಮತ್ತು ಮನಸ್ಸಿನಲ್ಲಿ ನಿರ್ಮಲನಾಗಿರುವುದಕ್ಕೂ ಮತ್ತು ವಂಚನೆಯಿಲ್ಲದೆ ವರ್ತಿಸುವುದಕ್ಕೂ ಪ್ರಯತ್ನಿಸುತ್ತೇನೆ."

ತಮ್ಮ ವಯಸ್ಸಿಗೆ ಅನುಗುಣವಾದ ಶರೀರ ದಾರ್ಢ್ಯತೆಯಿಲ್ಲದ ಮರಿಗಳನ್ನು ಈ ಭಾಗದ ಪದಕಗಳಿಗೆ ಪ್ರಯತ್ನಮಾಡಗೊಡಿಸಬಾರದು.

## ತಾಲೀಂ (Athlete)

ಈ ಪರೀಕ್ಷೆಗಳು ಎರಡು ವರ್ಗಗಳಾಗಿ ಭಾಗಿಸಲ್ಪಟ್ಟಿವೆ: "ಅ" ಮತ್ತು "ಆ". "ಅ" ವರ್ಗವು ೭ರಿಂದ ೧೦ ವರ್ಷಗಳ ವಯಸ್ಸಿನ ಮರಿಗಳಿಗೆ; "ಆ" ೧೦ ರಿಂದ ೧೨ರ ವರೆಗೆ. ಎರಡು ವರ್ಗಗಳ ಪರೀಕ್ಷೆಗಳೂ ಒಂದೇ, ಆದರೆ ದರ್ಜೆಗಳು ಬೇರೆ.



ಸೂಚನೆ :—"ಅ" ವರ್ಗದ ಮರಿಗಳ ಸರಾಸರಿ ಎತ್ತರವು ೪ ಅಡಿ ೧೦ ಅಂಗುಲ. ಯಾವ ಮರಿಯಾದರೂ ಈ ವರ್ಗದಲ್ಲಿ ಮೀರಿ ಬೆಳೆದಿದ್ದರೆ (ಎತ್ತರದಲ್ಲಿ ಮಾತ್ರವೇ ಅಲ್ಲ) ಅವನನ್ನು "ಆ" ವರ್ಗದಲ್ಲಿ ಪರೀಕ್ಷಿಸಬೇಕು.

"ಅ" ವರ್ಗದವರು ಸಮರ್ಥರಿರಬೇಕು :—

೧೬ ಸೆಕೆಂಡುಗಳಲ್ಲಿ ೧೦೦ ಗಜಗಳ ದೂರ ಓಡುವುದರಲ್ಲಿ.

೨॥ ಅಡಿಗಳ ಎತ್ತರ ನೆಗೆಯುವುದರಲ್ಲಿ.

೬ ಅಡಿಗಳ ಉದ್ದ ಹಾರುವುದರಲ್ಲಿ.

೧೦ ಅಡಿಗಳ ಹಗ್ಗ ಅಥವಾ ಗಳುವನ್ನು ಹತ್ತುವುದರಲ್ಲಿ.

೨೦ ಗಜಗಳ ದೂರ ಕ್ರಿಕೆಟ್ ಚೆಂಡನ್ನು ಎಸೆಯುವುದರಲ್ಲಿ.

೧೫ ಗಜಗಳ ದೂರದಿಂದ ಎಸೆದ ಚೆಂಡನ್ನು ಆತುಕೊಳ್ಳುವುದರಲ್ಲಿ.

ಕೆಳಗೆ ಕಂಡವುಗಳಲ್ಲಿ ಯಾವುದಾದರೊಂದನ್ನು ಮಾಡಬೇಕು :—

(ಅ) ತನ್ನ ತಲೆಯ ಮೇಲೆ ನಿಂತುಕೊಳ್ಳುವುದು.

(ಆ) 'ಬಂಡಿಚಕ್ರ' ವನ್ನು ತಿರುಗಿಸುವುದು.

(ಇ) ಮುಷ್ಟಿಯುದ್ಧ ಮಾಡುವುದು (ಹೊಡೆಯುವ ಮತ್ತು ತಪ್ಪಿಸಿಕೊಳ್ಳುವ ಸರಿಯಾದ ಮಾರ್ಗಗಳು ತಿಳಿದಿರಬೇಕು.)

(ಈ) ಕುಸ್ತಿ ಮಾಡುವುದು (ಸರಿಯಾದರೀತಿಯಲ್ಲಿ.)

"ಆ" ವರ್ಗದವರು ಸಮರ್ಥರಿರಬೇಕು :—

೧೪ ಸೆಕೆಂಡುಗಳಲ್ಲಿ ೧೦೦ ಗಜಗಳು ಓಡುವುದರಲ್ಲಿ.

೨ ಅಡಿ ೧೦ ಅಂಗುಲಗಳ ಎತ್ತರ ನೆಗೆಯುವುದರಲ್ಲಿ.

೭ ಅಡಿ ೬ ಅಂಗುಲಗಳ ಉದ್ದ ಹಾರುವುದರಲ್ಲಿ.

೧೦ ಅಡಿಗಳ ಗಳುವನ್ನು ಹತ್ತುವುದರಲ್ಲಿ.

೩೦ ಗಜಗಳ ದೂರ ಕ್ರಿಕೆಟ್ ಚೆಂಡನ್ನು ಎಸೆಯುವುದರಲ್ಲಿ.

೨೦ ಗಜಗಳ ದೂರದಿಂದ ಎಸೆದ ಚೆಂಡನ್ನು ಆತುಕೊಳ್ಳುವುದರಲ್ಲಿ.

ಕೆಳಗೆ ಕಂಡವುಗಳಲ್ಲಿ ಯಾವುದಾದರೊಂದನ್ನು ಮಾಡಬೇಕು :—

(ಅ) ತನ್ನ ತಲೆಯಮೇಲೆ ನಿಂತುಕೊಳ್ಳುವುದು.

(ಆ) 'ಬಂಡಿಚಕ್ರ' ವನ್ನು ತಿರುಗಿಸುವುದು.

(ಇ) ಮುಷ್ಟಿಯುದ್ಧ ಮಾಡುವುದು (ಹೊಡೆಯುವ ಮತ್ತು ತಪ್ಪಿಸಿಕೊಳ್ಳುವ ಸರಿಯಾದ ಮಾರ್ಗಗಳು ತಿಳಿದಿರಬೇಕು.)

(ಈ) ಕುಸ್ತಿ ಮಾಡುವುದು (ಸರಿಯಾದ ರೀತಿಯಲ್ಲಿ.)

ಸೂಚನೆ :—'ಅ 'ಆ' ಗಳ ಕೊನೆಯ ಪರೀಕ್ಷೆಗಳ (ಇ) ಮತ್ತು (ಈ) ಗಳಲ್ಲಿ ಹೆಚ್ಚು ಪರಿಶ್ರಮವು ಬೇಕಾಗಿಲ್ಲ. ಸಾಮಾನ್ಯ ಪ್ರಾಥಮಿಕ ವಿಷಯಗಳು ಮತ್ತು ಹೆಚ್ಚು ಶಿಸ್ತು ಇದ್ದರೆ ಸಾಕು.

## ಈಜುಗಾರ (Swimmer)

೨೫ ಗಜಗಳು ಈಜುವುದಕ್ಕೆ ಬರಬೇಕು (ಯಾವ ರೀತಿಯಾದರೂ.) ಉಪ್ಪು ನೀರಿನಲ್ಲಿ ೬೦ ಸೆಕೆಂಡರುಗಳವರೆಗೂ ಸಿಹಿ ನೀರಿನಲ್ಲಿ ೩೦ ಸೆಕೆಂಡುಗಳವರೆಗೂ ಬೆನ್ನಿನ ಮೇಲೆ ತೇಲಲು ಸಮರ್ಥನಾಗಿರಬೇಕು.



ಕೈಗಳನ್ನು ಎದೆಯ ಮೇಲೆ ಜೋಡಿಸಿ ಮಡಿಸಿ ಕೊಂಡು, ಬೆನ್ನಿನ ಮೇಲೆ ೧೫ ಗಜಗಳವರೆಗೆ ಈಜಲು ಸಮರ್ಥನಾಗಿರಬೇಕು.

ನೀರುಕೋಳಿಯಂತೆ ಮುಳುಗಲು ಬರಬೇಕು (ನೀರಿನಲ್ಲಿ ನಿಂತು ಕೊಂಡು ಮುಳುಗಬೇಕು,) ಅಥವಾ ಮೊಳಕಾಲುಗಳನ್ನು ಎದೆಗೆ ಬಿಗಿದಪ್ಪಿ ಹಲಗೆ, ದಡ ಅಥವಾ ದೋಣಿಯಿಂದ ನೀರಿನೊಳಕ್ಕೆ ಹಾರಬೇಕು.

## ಸಂಗಡದಲ್ಲಿ ಆಡುವವ (Team Player)

ಈ ಪದಕಕ್ಕೆ ಯತ್ನಿಸುವ ಮರಿಯು ಮೂರು ತಿಂಗಳವರೆಗೆ ಒಂದು ಟೀಮಿನ ಸದಸ್ಯನಾಗಿರಬೇಕು. ಈ ಟೀಮು ಹಿರಿಯಣ್ಣನ ಅಥವಾ ಆತನಿಂದ ನೇಮಿಸ ಲ್ಪಟ್ಟವರ ಅಧೀನದಲ್ಲಿ ಇದ್ದಿರಬೇಕು. ಅವನು ಸರಿಯಾಗಿ ಆಡಿರಬೇಕು; (ತಪ್ಪಿಸಿಕೊಂಡಿದ್ದರೆ ಅದಕ್ಕೆ ಸರಿಯಾದ ಕಾರಣ ಗಳನ್ನು ಕೊಡಬೇಕು.) ಅವನ ಆಟವು ಸಮರ್ಪಕವಾಗಿಯೂ ಮತ್ತು ಅಂದವಾಗಿಯೂ ಇರಬೇಕು. ತಪ್ಪಿ ಆಡುವುದು ಅಥವಾ ಎದುರು ಮಾತನಾ ಡುವುದು ಇವುಗಳಿಗಾಗಿ ಅವನು ಯಾವಾಗಲೂ ಆಟದಿಂದ ಆಚೆಗೆ ಒಂದು ಸಲವಾದರೂ ಕಳುಹಿಸಲ್ಪಟ್ಟಿರಬಾರದು. ಆಟದ ನಿಯಮಗಳಿಗೆ ವಿಧೇಯನಾಗಿ ಒಳ್ಳೆಯ ಸ್ವಭಾವ, ಧೈರ್ಯ, ನಿರ್ವಂಚನೆ ಮತ್ತು ಅಸ್ವಾರ್ಥ ತೆಯ ಆಟವು, ಆಡುವುದರಲ್ಲಿ ಚತುರತೆಗಿಂತ ಹೆಚ್ಚು ಲೆಖ್ಖಕ್ಕೆ ಬರುತ್ತದೆ.



(ಮರಿಯು ಒಳ್ಳೆಯ ಆಟವನ್ನು ಅದು ಪ್ರತಿಪಕ್ಷದಿಂದಲೇ ಆದರೂ ಶ್ಲಾಘಿಸುವುದನ್ನು ರೂಢಿಯಲ್ಲಿ ತಂದಿರಬೇಕು.)

  

# ಮರಿಗಳ ಶಿಕ್ಷಣ



ಹುಡುಗರನ್ನು ಸುಶಿಕ್ಷಿತರನ್ನಾಗಿ ಮಾಡಬೇಕಾದರೆ ಮೊದಲು ಅವರನ್ನು ಚೆನ್ನಾಗಿ ತಿಳಿದಿರಬೇಕು. ಅವರ ಮನಸ್ಸು ಯಾವರೀತಿ ಕೆಲಸಮಾಡುತ್ತದೆ, ಅದನ್ನು ನಮ್ಮ ಉದ್ದೇಶಕ್ಕೂ ಅವರ ಅಭಿವೃದ್ಧಿಗೂ ಹೇಗೆ ಉಪಯೋಗಿಸಿಕೊಳ್ಳಬಹುದ[illegible]ದು ಗೊತ್ತಿರಬೇಕು. ಇವುಗಳಾವುವನ್ನೂ ಅರಿಯದೆ ಅವರನ್ನು ತರಪೇತು ಮಾಡಲು ಹೋಗುವವರು ಪೋಟಾರಿಸ ವಿಷಯಗಳನ್ನೇ ಅರಿಯದೆ ಅದನ್ನು ನಡೆಸಲು ಪ್ರಯತ್ನಪಟ್ಟಂತಾಗುತ್ತದೆ. ಸಣ್ಣ ವಯಸ್ಸಿನ ಹುಡುಗರ ರೀತಿಯೇ ಬೇರೆ ; ಮಧ್ಯ ವಯಸ್ಕರ ರೀತಿಯೇ ಬೇರೆ ; ಯುವಕರ ರೀತಿಯಂತೂ ಇದ್ದದ್ದೂ ಬೇರೆ. ಹೀಗಿರುವಲ್ಲಿ ಇವರೆಲ್ಲರಿಗೂ ಒಂದೇ ಕ್ರಮದಲ್ಲಿ ಶಿಕ್ಷಣಕೊಡುವುದು ಹೇಗೆ ತಾನೆ ಸಾಧ್ಯ.

ವಯೋಚಿತವಾಗಿ ಹುಡುಗರಲ್ಲಿ ಕೆಲ ಕೆಲವು ಗುಣಗಳು ವೃದ್ಧಿಯಾಗುತ್ತಿರುತ್ತವೆ, ಕ್ಷಯವಾಗುತ್ತಿರುತ್ತವೆ. ಏಳೆಂಟು ವರ್ಷಗಳ ಹುಡುಗರ ಪ್ರಪಂಚವೇ ಒಂದು ವಿಧ. ಆಗ ಅವರಲ್ಲಿ ಚಟುವಟಿಕೆಯು ಹೆಚ್ಚು ; ವಿಷಯಗ್ರಹಣಶಕ್ತಿಯೂ, ಆಸಕ್ತಿಯೂ ಹಾಗೆಯೇ. ಒಂದು ಕೋಲಿನ ಮೇಲಾಗಲಿ, ಮರದ ಕೊಂಬೆಯಮೇಲಾಗಲಿ ಸವಾರಿಮಾಡಿದರೆ ಕುದುರೆಯ ಮೇಲೆ ಸವಾರಿಮಾಡಿದ್ದಕ್ಕಿಂತ ಹೆಚ್ಚು ಸಂತೋಷ. ಕಂಡದ್ದೆಲ್ಲಾ ಬೇಕೆಂಬ ಹಟ. ಕಥೆಗಳನ್ನು ಕೇಳುತ್ತಿದ್ದರೆ ಊಟವೇ ಬೇಡ. ಇದು ಒಳ್ಳೆಯದು, ಇದು ಕೆಟ್ಟದ್ದು ಎಂದು ವಿಚಾರಮಾಡುವ ಶಕ್ತಿ ಇರುವುದಿಲ್ಲ. ಇಂಥವರಿಗೆ ' ಸ್ಕೌಟು ' ಶಿಕ್ಷಣ ಕ್ರಮದಿಂದ ಏನೂ ಪ್ರಯೋಜನವಾಗಲಾರದು. ಆದುದರಿಂದ ಅವರ ವಯಸ್ಸಿಗೆ ತಕ್ಕಂತೆ ಕೊಡಬಹುದಾದ ಶಿಕ್ಷಣಕ್ಕೆ ' ಮರಿಗಳ ಶಿಕ್ಷಣ ' ಎಂದು ಹೆಸರು.

ಮರಿಗಳ ಶಿಕ್ಷಣವನ್ನೆಲ್ಲಾ ಮೊದಲಿನಿಂದ ಕೊನೆಯವರೆಗೂ ನೋಡಿದರೆ ಇದೊಂದು ವನ ವಿದ್ಯೆ ಎಂದು ತಿಳಿದುಬರುತ್ತದೆ. ಇಂತಹ ವನ ವಿದ್ಯೆಯಲ್ಲಿ ಮನುಷ್ಯರಿಗಿಂತ ಪ್ರಾಣಿಗಳು ಹೆಚ್ಚು ಚತುರವೆಂದು ನಾವು ಹೇಳಬೇಕಾಗಿಲ್ಲ. ಅಡವಿಯಲ್ಲಿ ಶತೃಗಳಿಗೆ ಸಿಕ್ಕದಂತೆ ಅಡಗಿಕೊಳ್ಳುವುದು, ತಮ್ಮ ಆಹಾರವನ್ನು ತಾವೇ ಬೇಟೆಯಾಡಿ ಒದಗಿಸಿಕೊಳ್ಳುವುದು, ಮಳೆ, ಛಳಿ, ಬಿಸಿಲು ಮೊದಲಾದವುಗಳ ಬಾಧೆಗಳಿಂದ ನಿವೃತ್ತರಾಗುವುದು, ಇವೇ ಮುಂತಾದ ಅನೇಕ ಸ್ವಾವಲಂಬನ ವಿದ್ಯೆಗಳಲ್ಲಿ ಪ್ರಾಣಿಗಳು ನಿರ್ವಹಿಸುವಷ್ಟು ಮನುಷ್ಯರ ಕೈಲೇನಾದೀತು?

ಸ್ಕೌಟು ಶಿಕ್ಷಣದ ಸ್ಥಾಪನಾಚಾರ್ಯರಾದ ಸರ್ (ಈಗ ಲಾರ್ಡ್ ಗಿಲ್‌ವೆಲ್) ರಾಬರ್ಟ್ ಬೇಡನ್ ಪೊವೆಲ್‌ರವರು ಹುಡುಗರ ಶಿಕ್ಷಣದಲ್ಲಿ ಈ ರೀತಿಯ ಸ್ವಾವಲಂಬನದ ಅವಶ್ಯಕತೆಯನ್ನು ಕಂಡು, ಈ ಶಿಕ್ಷಣ ಕ್ರಮದಲ್ಲಿ ಸಾಧಾರಣವಾಗಿ ಮೃಗಗಳ ಕಥೆಗಳನ್ನು ಆಧಾರವಾಗಿಟ್ಟುಕೊಂಡಿರುವರು. ಇದರಲ್ಲಿ ಹುಡುಗರಿಗೆ ಮೃಗಗಳ ಆಟಪಾಟಗಳು, ಕುಣಿತಗಳು, ಕೂಗುಗಳು ಇವೇ ಹೆಚ್ಚು. ಮೃಗಪಕ್ಷಿಗಳು ಬಯಲುಗಳಲ್ಲಿಯೂ ಕಾಡುಗಳಲ್ಲಿಯೂ ಇರುವುದರಿಂದ ಈ ಹುಡುಗರ ಆಟಗಳೆಲ್ಲವೂ ಬಯಲುಗಳಲ್ಲೇ. ಕಾಡು ಮೃಗಗಳಿಗೆಲ್ಲಾ ಸಿಂಹವೇ ಧೊರೆ; ಆದುದರಿಂದ ಮೈಸೂರಿನ ಮರಿಗಳ ಶಿಕ್ಷಣಕ್ಕೆ 'ಸಿಂಹದ ಮರಿ'ಗಳ ಶಿಕ್ಷಣವೆಂದು ಹೆಸರು.

ಮರಿಗಳ ಶಿಕ್ಷಣವು ಸ್ಕೌಟುಗಳ ಶಿಕ್ಷಣದಂತೆಯೇ ಒಂದು ಶೀಲ ಶಿಕ್ಷಣ. ಚಿಕ್ಕಂದಿನಿಂದಲೂ ಸರಿಯಾದ ತಳಹದಿಯನ್ನು ಹಾಕಿ, ಹುಡುಗರಲ್ಲಿ ಒಳ್ಳೆಯ ಗುಣಗಳು ಬೆಳೆಯುವಂತೆ ಮಾಡುವುದೇ ಈ ಕ್ರಮದ ಉದ್ದೇಶ. ಮುಂದೆ ಅವರು ಸ್ಕೌಟುಗಳಾದಾಗ ಕಲಿಯಬೇಕಾದ ಅಂಶಗಳಲ್ಲಿ ಸರಳ ಭಾಗಗಳನ್ನು ಇಲ್ಲಿ ಕಲಿಯುತ್ತಾರೆ. ಪರೋಪಕಾರವನ್ನು ಮಾಡಬೇಕೆಂಬುದೇ ಸ್ಕೌಟುಗಳ ನಿಯಮ. ತಂದೆತಾಯಿಗಳಿಗೆ, ಅಣ್ಣ ತಮ್ಮಂದಿರಿಗೆ, ಅಕ್ಕತಂಗಿಯರಿಗೆ ಬೇಕಾದ ಸಣ್ಣಪುಟ್ಟ ಕೆಲಸಗಳನ್ನು ಮಾಡಿಕೊಡುವುದೇ

ಇಲ್ಲಿಯ ಪರೋಪಕಾರ. ಅಂದರೆ, ಇತರರಿಗೆ ಮಾಡಲೇಕೂಡದೆಂದಲ್ಲ. ಆದರೆ ಶಕ್ತ್ಯಾನುಸಾರ ಮುಂದೆ ಅವರು ಸ್ಕೌಟುಗಳಾದಾಗ ಮಾಡಬೇಕಾದ ಪರೋಪಕಾರಕ್ಕೆ ಈಗಿನಿಂದ ತಳಹದಿಯನ್ನು ಹಾಕಿ, ಸರಿಯಾದ ಮನೋಭಾವವು ಉಂಟಾಗುವಂತೆ ಏರ್ಪಡಿಸುವುದೇ ಮರಿಗಳ ಶಿಕ್ಷಣದ ಉಚ್ಚ ಧ್ಯೇಯ.

## ಕೋಮಲಪಾದ

ಸ್ಕೌಟು ಶಿಕ್ಷಣದಲ್ಲಿರುವಂತೆಯೇ ಮರಿಗಳ ಶಿಕ್ಷಣದಲ್ಲಿಯೂ ಮೂರು ವರ್ಗಗಳಿವೆ. ಇವೇ ಕೋಮಲಪಾದ, ಒಂದು ತಾರೆ ಮತ್ತು ಎರಡುತಾರೆ. ಇವುಗಳಲ್ಲಿ ಕೋಮಲಪಾದದ ಶಿಕ್ಷಣವೇ ಮೊದಲನೆಯದು. ಇಲ್ಲಿ ಕಲಿಯಬೇಕಾದ್ದು ಇಷ್ಟೆ: ಭಾಷೆ, ನಿಯಮ, ಗುಟ್ಟಿನ ಗುರುತು ಮತ್ತು ವಂದನೆ.

## ಭಾಷೆ

ನಾನು—

(೧) ದೇವರಿಗೂ, ಶ್ರೀಮನ್ಮಹಾರಾಜರಿಗೂ ಮತ್ತು ಗುಂಪಿನ ನಿಯಮಕ್ಕೂ ವಿಧೇಯನಾಗಿರುವುದಕ್ಕೂ,

(೨) ಪ್ರತಿನಿತ್ಯವೂ ಯಾರಿಗಾದರೂ ಒಂದು ಉಪಕಾರವನ್ನು ಮಾಡುವುದಕ್ಕೂ,

ನನ್ನ ಕೈಲಾದಮಟ್ಟಿಗೂ ಪ್ರಯತ್ನಿಸುತ್ತೇನೆಂದು ಭಾಷೆ ಕೊಡುತ್ತೇನೆ.

ಈ ಭಾಷೆಯನ್ನು ಭಯಭಕ್ತಿಗಳಿಂದ ಕೊಡತಕ್ಕದ್ದು. ಏಕೆಂದರೆ ಭಾಷೆಯನ್ನು ಕೊಟ್ಟ ಮೇಲೆ ಅದನ್ನು ಉಳಿಸಿಕೊಳ್ಳದಿದ್ದರೆ ಕೇವಲ ಅಪಮಾನಕರ.

ದೇವರಿಗೆ ವಿಧೇಯರಾಗಿರುವುದು ಹೇಗೆಂದರೆ: ಮಾಡುವ ಕೆಲಸಗಳೆಲ್ಲೆಲ್ಲಾ ಆತನನ್ನು ನೆನೆಸಿಕೊಳ್ಳುವುದು; ಮತಧರ್ಮಕ್ಕೆ ಅನುಸಾರವಾಗಿ

ನಡೆದುಕೊಳ್ಳುವುದು ; ಆತನು ಸೃಷ್ಟಿಸಿರುವ ಪ್ರಾಣಿವರ್ಗಕ್ಕೆ ಕೈಲಾದ ಸಹಾಯವನ್ನು ಮಾಡುವುದು ; ದೈನಂದಿನ ಸತ್ಕಾರ್ಯವನ್ನು ಕ್ರಮ ವಾಗಿ ನೆರವೇರಿಸುವುದು ; ಉದಾರಬುದ್ಧಿಯಿಂದಲೂ ವಿನಯದಿಂದಲೂ ನಡೆದುಕೊಳ್ಳುವುದು.

ಶ್ರೀಮನ್ಮಹಾರಾಜರಿಗೆ ವಿಧೇಯರಾಗಿರುವುದು ಹೇಗೆಂದರೆ: ಅವರ ಅಧಿಕಾರಿಗಳನ್ನು ಮನ್ನಣೆ ಮಾಡಿ, ಅವರ ಧ್ವಜಕ್ಕೆ ವಂದನೆಯನ್ನು ಸಮರ್ಪಿಸುವುದು ; ಆರೋಗ್ಯ ದೃಢಕಾಯರಾಗಿಯೂ ಪರೋಪಕಾರಿ ಗಳಾಗಿಯೂ ಆಗಿ ಮೈಸೂರು ಸಂಸ್ಥಾನದ ಮತ್ತು ಮಾತೃಭೂಮಿಯ ಸತ್ಪ್ರಜೆಗಳಾಗುವಂತೆ ಶಿಕ್ಷಣವನ್ನು ಹೊಂದುವುದು.

ಪರೋಪಕಾರದ ವಿಚಾರವನ್ನು ಒತ್ತಿ ಹೇಳಬೇಕಾಗಿಲ್ಲ. ಪರೋಪ ಕಾರ ಮಾಡಬೇಕಾದರೆ ಅದಕ್ಕೆ ತಕ್ಕ ಯೋಗ್ಯತೆಯನ್ನು ಕಷ್ಟಪಟ್ಟು ಶಿಕ್ಷಣದಿಂದ ಪಡೆಯಬೇಕಲ್ಲದೆ ಸಹಾಯ ಮಾಡಲು ಸದಾಸಿದ್ಧರಾಗಿರ ಬೇಕು.

ಆದರೆ ಒಂದು ವಿಷಯವನ್ನು ಮಾತ್ರ ಚೆನ್ನಾಗಿ ಮನಸ್ಸಿನಲ್ಲಿಡಬೇಕು. ಅದೇನೆಂದರೆ ಮಾಡಿದ ಉಪಕಾರಕ್ಕೆ ಬದಲಾಗಿ ಯಾವ ರೀತಿಯ ಪ್ರತ್ಯುಪ ಕಾರವನ್ನೂ ಹೊಂದಕೂಡದು. ಹಾಗೆ ಮಾಡಿದರೆ ಅದು ಕೂಲಿಗಾಗಿ ಮಾಡಿದಂತಾಗುವುದು ; ಪರೋಪಕಾರವೆನ್ನಿಸಿಕೊಳ್ಳುವುದಿಲ್ಲ.

## ನಿಯಮ

(೧) ಮರಿಯು ಹಿರಿಯರಿಗೆ ವಿಧೇಯನು.

(೨) ಮರಿಯು ತನಗೆ ತಾನೇ ಸೋಲುವುದಿಲ್ಲ.

ಪ್ರತಿಯೊಂದು ಆಟಕ್ಕೂ ಕೆಲವು ನಿಯಮಗಳಿರುತ್ತವೆ. ಆದುದರಿಂದ ಆಟವನ್ನು ಸರಿಯಾಗಿ ಆಡಿದರೆ ನಿಯಮಗಳಿಗನುಗುಣವಾಗಿ ನಡೆದುಕೊಂ ಡಂತಾಯಿತು. ಹಾಗೆಯೇ ಈ ಮರಿಗಳ ಆಟಕ್ಕೂ ಎರಡು ನಿಯಮಗಳಿವೆ.

ಇವನ್ನು ಮರಿಗಳು ನೆನಪಿನಲ್ಲಿಟ್ಟುಕೊಳ್ಳುವುದಲ್ಲದೆ ಅರ್ಥವನ್ನೂ ಚೆನ್ನಾಗಿ ತಿಳಿದುಕೊಂಡು ಅದರಂತೆ ನಡೆಯಬೇಕು.

ಹಿರಿಯರು ಎಂದರೆ ದೊಡ್ಡವರು. ದೊಡ್ಡವರಿಗೆ ಚಿಕ್ಕವರಿಗಿಂತ ಹೆಚ್ಚು ಅನುಭವವಿರುತ್ತದೆ. ಚಿಕ್ಕವರಿಗೆ ಯಾವುದು ಒಳ್ಳೆಯದು ಯಾವುದು ಕೆಟ್ಟದು ಎಂಬುದನ್ನು ಅವರು ಚೆನ್ನಾಗಿ ತಿಳಿದಿರುತ್ತಾರೆ. ಆದುದರಿಂದ ಮರಿಯು ಹಿರಿಯರಿಗೆ ವಿಧೇಯನಾಗಿರಬೇಕು ; ಅವರು ಹೇಳಿದ ಹಾಗೆ ಕೇಳಬೇಕು.

ಹಿರಿಯರು ಯಾವುದಾದರೊಂದು ಕೆಲಸವನ್ನು ಮಾಡಹೇಳಿದರೆ ಮರಿಯು ತನಗೆ ಅದರಲ್ಲಿ ಇಷ್ಟವಿರಲಿ ಇಲ್ಲದಿರಲಿ, ಅದು ಅತಿ ಕಷ್ಟವಾಗಿ ತೋರಲಿ ತೋರದಿರಲಿ, ತನಗೆ ತಾನೇ ಸೋಲದೆ ಅಂದರೆ ಸ್ವೇಚ್ಛಾನುವರ್ತಿಯಾಗಿ ಮನಸ್ಸಿಗೆ ತೋರಿದಂತೆ ನಡೆದುಕೊಳ್ಳದೆ ಕೆಲಸಮಾಡಬೇಕು. ಎಷ್ಟೇ ಕಷ್ಟವಾದರೂ ಹಿಡಿದ ಕೆಲಸವನ್ನು ಬಿಡಬಾರದು.

## ವಂದನೆ

ಸಾಧಾರಣವಾಗಿ ಒಂದೊಂದು ದೇಶದವರು ಒಂದೊಂದು ವಿಧದಲ್ಲಿ ವಂದಿಸುವುದುಂಟು. ಆದರಿಂದ ಅವರು ಆಯಾ ದೇಶದವರೆಂದು ಸುಲಭವಾಗಿ ಗುರ್ತಿಸಬಹುದು. ಹಾಗೆಯೇ ಪ್ರತಿಯೊಂದು ಸಂಘದವರೂ ಒಂದೊಂದು ವಿಧದಲ್ಲಿ ವಂದಿಸುತ್ತಾರೆ. ಸ್ಕೌಟುಗಳು ಮೂರು ಬೆರಳುಗಳಿಂದಲೂ, ಮರಿಗಳು ಎರಡು ಬೆರಳುಗಳಿಂದಲೂ ವಂದಿಸುತ್ತಾರೆ ; ಇದೇ ಅವರ ಗುಟ್ಟಿನ ಗುರುತು.

**ಗುಟ್ಟಿನ ಗುರುತು**

ಬಲಗೈ ಹೆಬ್ಬೆರಳಿನಿಂದ ಕಿರಿ ಬೆರಳನ್ನೂ ಅದರ ಪಕ್ಕದ ಬೆರಳನ್ನೂ ಮಡಿಸಿ ಹಿಡಿದುಕೊಂಡು ಉಳಿದ ಎರಡು ಬೆರಳುಗಳನ್ನು ಅಗಲಿಸಿ

ಸೆಟ್ಟಗೆ ನಿಲ್ಲಿಸಬೇಕು. ಈ ರೀತಿ ಮಾಡಿಕೊಂಡು ಬಲಗೈಯನ್ನು ಮಡಿಸಿ ಭುಜದ ಮಟ್ಟಕ್ಕೆ ಎತ್ತಿದರೆ ಅದು ಅರ್ಧ ವಂದನೆ. ಈ ವಂದನೆಯನ್ನು ಧರ್ಮಸ್ವೀಕಾರ ಕಾಲದಲ್ಲಿಯೂ, ವರ್ಷಂಪ್ರತಿ ಭಾಷೆಯನ್ನು ಕೊಡುವಾಗಲೂ ಮಾಡತಕ್ಕದ್ದು. ಅದೇ ರೀತಿ ಮಾಡಿಕೊಂಡು ಬಲಗೈಯನ್ನು ಹುಬ್ಬಿನ ಮೇಲ್ಭಾಗಕ್ಕೆ ತಂದು ಮೇಲು ತೋಳನ್ನು ಭುಜಕ್ಕೆ ಸಮನಾಗಿ ನಿಲ್ಲಿಸಿದರೆ ಅದು ಪೂರ್ಣ ವಂದನೆ. ಅಧಿಕಾರಿಗಳು, ನಾಯಕರು, ಜೊತೆಯ ಮರಿಗಳು ಇವರಿಗೆಲ್ಲಾ ಪೂರ್ಣ ವಂದನೆಯನ್ನೇ ಮಾಡಬೇಕು.



ನಡೆದು ಹೋಗುತ್ತಿರುವಾಗ ಯಾರೇ ಆಗಲಿ ಮುಂದೆ ಬಂದರೆ ನಿಂತು ವಂದನೆ ಮಾಡಬೇಕಾಗಿಲ್ಲ; ಹಾಗೆಯೇ ಮುಂದೆ ಹೋಗುತ್ತಾ ವಂದನೆ ಮಾಡಬಹುದು. ಪೂರ್ಣ ವಂದನೆಯನ್ನು ಮಾಡಬೇಕಾದ ಇತರ ಸಂದರ್ಭಗಳು :—

೧. ಶ್ರೀಮನ್ಮಹಾರಾಜರವರ ಸೈನ್ಯಾಧಿಕಾರಿಗಳನ್ನು ಎದುರುಗೊಂಡಾಗ,
೨. ಗಂಡಭೇರುಂಡ ಧ್ವಜಕ್ಕೆ ನಮಿಸುವಾಗ,
೩. ಮೈಸೂರಿನ ಶ್ರೇಯಃ ಪ್ರಾರ್ಥನೆಯ ಆದ್ಯಂತಕಾಲಗಳಲ್ಲಿ,
೪. ಮಾತೃಭೂಮಿಯ ಶ್ರೇಯಃಪ್ರಾರ್ಥನೆಯನ್ನು ಮಾಡುವಾಗ.

ಎರಡು ಬೆರಳುಗಳಿಂದ ವಂದಿಸುವುದರಿಂದ ಮರಿಯು ತನ್ನ ಎರಡು ನಿಯಮಗಳನ್ನು ನೆನಪು ಮಾಡಿಕೊಟ್ಟ ಹಾಗಾಗುವುದು; ಮತ್ತು ಬೆರಳುಗಳನ್ನು ಅಗಲಿಸಿ ಹಿಡಿಯುವುದರಿಂದ ತೋಳನ ಮರಿಯ ಕಿವಿಗಳು ಕಾಣುವ ರೀತಿಯಲ್ಲಿ ಕಾಣುವುದರಿಂದ, ತನ್ನ ಶಾಖೆಯನ್ನು ಸೂಚಿಸಿದಂತಾಗುತ್ತದೆ. ಏಕೆಂದರೆ ತೋಳನ ಮುಖವೇ ಮರಿಗಳ ಸಂಸ್ಥೆಯ ಚಿಹ್ನೆ: (ಈಚೆಗೆ ಮೈಸೂರು ಸಂಸ್ಥಾನದಲ್ಲಿ ಕೆಲವು ಕಾರಣಗಳಿಂದ ಈ ಚಿಹ್ನೆಯನ್ನು ಸಿಂಹದ ಮುಖಕ್ಕೆ ಬದಲಾಯಿಸಿದ್ದಾರೆ.) ಹಿರಿಯಣ್ಣನು ಮರಿಗಳಿಗೆ ಮಾತ್ರ ಎರಡು ಬೆರಳುಗಳಿಂದಲೇ ವಂದಿಸುವನು.

ಗುಂಪಿಗೆ ಹಿರಿಯಣ್ಣನಾಗಲಿ ಅಥವಾ ಇನ್ನಾರಾದರೂ ಅಪರಿಚಿತ ಮಹನೀಯರು ಬಂದಾಗ ಗುಂಪು ಅವರನ್ನು ಬೇರೆ ವಿಧದಲ್ಲಿ ವಂದಿಸ ಬೇಕು. ಈ ವಂದನೆಗೆ 'ವೀರ ಘರ್ಜನೆ' ಎಂದು ಹೆಸರು.

## ವೀರ ಘರ್ಜನೆ

## (GRAND HOWL)

ಹಿರಿಯಣ್ಣನು, 'ಗುಂಪ್, ಗುಂಪ್, ಗುಂಪ್' ಎಂದು ಕೂಗಿದ ಕೂಡಲೆ ಗುಂಪಿನ ಮರಿಗಳೆಲ್ಲರೂ ತಾವು ಅವಿತುಕೊಂಡಿದ್ದ ಜಾಗಗಳಿಂದ '**ಗೂ ಊ ಊ ಂ ಪ್** ' ' ' ಎಂದು ಕೂಗುತ್ತಾ ಬಂದು ಅವನ ಸುತ್ತಲೂ ವೃತ್ತಾಕಾರವಾಗಿ ನಿಂತು, ಕೈಗಳನ್ನು ಬಿಟ್ಟು ತಯಾರಿನಲ್ಲಿ ನಿಲ್ಲಬೇಕು. ಆಗ ಹಿರಿಯಣ್ಣನು "ವೀರ ಘರ್ಜನೆಗೆ ಸಿದ್ಧರಾಗಿ" ಎಂದು ಹೇಳಿದ ಕೂಡಲೆ ಎಲ್ಲರೂ ಒಂದುಸಾರಿ ಥಂಗನೆ ಮೇಲಕ್ಕೆ ನೆಗೆದು ಹಿಮ್ಮಡಿಗಳ ಮೇಲೆ ಕುಳಿತುಕೊಂಡು ಎರಡು ಕೈಗಳ ಬೆರಳುಗಳನ್ನೂ ವಂದನೆಯಲ್ಲಿ ಹಿಡಿಯು ವಂತೆ ಹಿಡಿದು ಮೊಣಕಾಲನ್ನು ದೂರ ದೂರವಾಗಿ ಮಾಡಿ ಕೈ ಬೆರಳುಗ ಳನ್ನು ಅವುಗಳ ಮಧ್ಯೆ ನೆಲವನ್ನು ಮುಟ್ಟುವಂತೆ ಇಟ್ಟುಕೊಳ್ಳಬೇಕು. ಹಿರಿಯಣ್ಣನು "ಹು" ಎಂದ ಕೂಡಲೆ ಎಲ್ಲರೂ ಕತ್ತುಗಳನ್ನು ಮೇಲಕ್ಕೆತ್ತಿ ಆಕಾಶವನ್ನು ನೋಡುತ್ತಾ :—

**ಆ—ಚಾ—ರ್ಯ!**

**ಶತಾಯು, ಗತಾಯು, ಸಾಧಿಪೆವು ನಾವ್!**

ಎಂದು ಕೂಗಬೇಕು. ಕೊನೆಯ ಮಾತನ್ನು ಮಾತ್ರ ತೋಳಗಳು ಬೊಗಳು ವಂತೆ ಹೇಳಬೇಕು. ಅದು ಪೂರೈಸಿದ ತಕ್ಷಣವೇ ಎಲ್ಲರೂ ಥಂಗನೆ ಎದ್ದು ನಿಂತು ತಮ್ಮ ಎರಡು ಕೈಗಳಿಂದಲೂ ವಂದಿಸುತ್ತಾ ನಿಲ್ಲಬೇಕು. ಕಾಲು ಗಳ ಹಿಮ್ಮಡಿಯು ಕೂಡಿರಬೇಕು. ಆಗ ಹಿರಿಯಣ್ಣನು :—

**ನೀವ್, ಸಾ—ಧೀ—ಸಿ!**

ಎಂದು ಹೇಳಿದ ಕೂಡಲೆ ಎಲ್ಲರೂ ಎಡಗೈಯನ್ನು ಮಾತ್ರ ಕೆಳಕ್ಕೆ ಬಿಟ್ಟು :—

**ನಾವ್, ಸಾ—ಧೀ—ಪೆ—ವು!!**

ಎಂದು ಕಿರಚುತ್ತಾ ಬಲಗೈಯನ್ನು ಕೆಳಕ್ಕಿಳಿಸಿ ತಯಾರಿನಲ್ಲಿ ನಿಲ್ಲಬೇಕು.

# ಸಭಾ ಕಲ್ಲು ಮತ್ತು ವೃತ್ತಗಳು

## (COUNCIL ROCK AND CIRCLES)

ಮರಿಗಳ ಗುಂಪಿನಲ್ಲಿ ಹಿರಿಯಣ್ಣನಿಗೆ 'ಅಖೇಲ' ಎಂದು ಹೆಸರು. ಗುಂಪುಗಳಲ್ಲಿ ಮರಿಗಳು ಕುಳಿತುಕೊಳ್ಳುವುದಕ್ಕೂ, ಅಖೇಲನು ಕುಳಿತು ಕೊಳ್ಳುವುದಕ್ಕೂ ಕಾಡಿನ ಮೃಗಗಳ ಪದ್ಧತಿಯನ್ನು ಅನುಸರಿಸಿ ಕೆಲವು ಬಗೆಯ ವೃತ್ತಗಳನ್ನು ಏರ್ಪಡಿಸಿದ್ದಾರೆ. ಇದರಲ್ಲಿ ಮೊದಲನೆಯದು '**ಸಭಾ ಕಲ್ಲು.**' ಗುಂಪುಗಳಲ್ಲಿ ಸಭಾ ಕಲ್ಲನ್ನು ಕಲ್ಲುಗಳ ಒಂದು ಚಿಕ್ಕ ವೃತ್ತ ದಿಂದಲೊ, ಮಳೆಗಳಿಂದಲೊ ಅಥವಾ ಸುಣ್ಣದಿಂದ ಬರೆಯುವುದರಿಂದಲೊ ಗುರ್ತಿಸಬಹುದು. ಇದು ಅಡ್ಡಲಾಗಿ ಸುಮಾರು ಮೂರು ಹೆಜ್ಜೆಗಳ ದೂರ ವಿರಬೇಕು. ಇದರ ಮಧ್ಯದಲ್ಲಿ ಗುಂಪಿನ ಗದೆಯೋ ಅಥವಾ ಧ್ವಜಸ್ತಂಭವೋ ಇರುತ್ತದೆ. ಇದೇ ಅಖೇಲನ ಪೀಠ.




ಎರಡನೆಯದೇ '**ಸಭಾವೃತ್ತ**'. ಮರಿಗಳು ಸಭೆಗಳಿಗಾಗಲಿ, ಪ್ರದರ್ಶನಗಳಿಗಾಗಲಿ ಅಥವಾ ಅಖೇಲನು ಹೇಳಿದುದನ್ನು ಕೇಳುವುದ

ಕ್ಕಾಗಲಿ ಈ ವೃತ್ತವನ್ನು ಏರ್ಪಡಿಸಿಕೊಳ್ಳಬೇಕು. ವೃತ್ತವು ಗುಂಪಿನ ಮರಿಗಳ ಸಂಖ್ಯೆಗನುಸಾರ ದೊಡ್ಡದು ಅಥವಾ ಸಣ್ಣನಾಗಬಹುದು. ಆದರೆ ಯಾವಾಗಲೂ ಅಡ್ಡಲಾಗಿ ಐದು ಹೆಜ್ಜೆಗಳಿಗೆ ಕಮ್ಮಿ ಇರಬಾರದು.

'**ಸಮಾರಂಭ ವೃತ್ತ**'ವೇ ಮೂರನೆಯದು. ಕೂಟಗಳಿಗಾಗಲಿ ಅಥವಾ ಕುಣಿತಗಳಿಗಾಗಲಿ ಈ ವೃತ್ತವನ್ನು ಏರ್ಪಡಿಸಿಕೊಳ್ಳಬೇಕು. ಇದು ಅಡ್ಡಲಾಗಿ ಹದಿನೈದು ಹೆಜ್ಜೆಗಳಿಗೆ ಕಮ್ಮಿ ಇರಕೂಡದು.

# ದೀಕ್ಷಾ ವಿಧಿ ಅಥವಾ ಧರ್ಮ ಸ್ವೀಕಾರ

## (INVESTITURE CEREMONY)

ಕೋಮಲಪಾದದ ಪರೀಕ್ಷೆಗಳನ್ನು ಕೊಟ್ಟಮೇಲೆ ಹುಡುಗನು ಗುಂಪಿಗೆ ಸೇರಲು ಅರ್ಹನಾಗುತ್ತಾನೆ. ಆಗ ಅವನನ್ನು ಗುಂಪಿಗೆ ಸೇರಿಸಿ ಕೊಳ್ಳುವುದಕ್ಕೆ 'ದೀಕ್ಷಾ ವಿಧಿ' ಅಥವಾ 'ಧರ್ಮ ಸ್ವೀಕಾರ' ಎಂದು ಹೆಸರು. ಈ ಸಂದರ್ಭಗಳಲ್ಲಿ ಗುಂಪಿನ ಎಲ್ಲಾ ಮರಿಗಳನ್ನೂ ಗಂಡಭೇರುಂಡ ಧ್ವಜ ಸ್ಥಂಭದ ಸುತ್ತಲೂ ಕುದುರೆಯ ಲಾಳದ ಆಕಾರದಲ್ಲಿ ನಿಲ್ಲಿಸಬೇಕು. ದೀಕ್ಷೆ ಯನ್ನು ಕೊಡುವ ಅಧಿಕಾರಿಗಳು ಬಯಲು ಬಿಟ್ಟಿರುವ ಭಾಗದಲ್ಲಿ ಮುಂದು ಗಡೆ ನಿಂತುಕೊಳ್ಳುವರು. ಹಿರಿಯಣ್ಣನಾಗಲಿ ಅಥವಾ ಕಿರಿಯಣ್ಣನಾಗಲಿ ಕಂಠವಸ್ತ್ರ ಮತ್ತು ಮರಿಗಳ ಪದಕಗಳನ್ನು ಹಿಡಿದುಕೊಂಡು ಸಿದ್ಧನಾಗಿರ ಬೇಕು. ನಾಯಕರು ತಮ್ಮ ತಮ್ಮ ಪಂಗಡಗಳಿಂದ ಒಂದು ಹೆಜ್ಜೆ ಮುಂದೆ ಬಂದು ನಿಂತಿರಬೇಕು.

ಪ್ರತಿ ನಾಯಕನೂ ತನ್ನ ಪಂಗಡದವರನ್ನು ಒಬ್ಬೊಬ್ಬನನ್ನಾಗಿ ಆ ಅಧಿಕಾರಿಗಳ ಬಳಿಗೆ ಕರತಂದು ಮೂರು ಹೆಜ್ಜೆಗಳ ದೂರದಲ್ಲಿ ನಿಲ್ಲಿಸಿಕೊಂಡು

ಇಬ್ಬರೂ ಅವರಿಗೆ ವಂದಿಸಬೇಕು. ನಂತರ ನಾಯಕನು ಒಂದು ಹೆಜ್ಜೆ ಪಕ್ಕಕ್ಕೆ ಸರಿದು ನಿಲ್ಲುವನು. ಆಗ ಅವರಿಬ್ಬರಿಗೂ ಈ ಸಂಭಾಷಣೆಯಾಗುವುದು :—

ಅಧಿ—ನಿನಗೆ ಗುಂಪಿನ ನಿಯಮವು ಗೊತ್ತಿದೆಯೊ ?

ಮರಿ—ಗೊತ್ತಿದೆ.

ಅಧಿ—ಅದರ ಅರ್ಥವನ್ನು ಬಲ್ಲೆಯಾ ?

ಮರಿ—ಬಲ್ಲೆ.

ಅಧಿ—ಅದರಂತೆ ನಡೆಯಲು ಸಿದ್ಧನಾಗಿರುವೆಯಾ ?

ಮರಿ—ಇರುವೆನು.

ಅಧಿ—ಮರಿಗಳ ಭಾಷೆಯನ್ನು ಕೊಡುವೆಯಾ ?

ಮರಿ—ಕೊಡುವೆನು.

ಆಮೇಲೆ ಅವನು ತನ್ನ ಗುಂಪಿಗೆ ಎದುರಾಗಿ ತಿರುಗಿಕೊಂಡು ಅರ್ಧ ವಂದನೆಯನ್ನು ಮಾಡಬೇಕು. ಅವರೂ ಅರ್ಧವಂದನೆಯನ್ನು ಮಾಡುವರು. ಹಾಗೆ ಅರ್ಧವಂದನೆಯನ್ನು ಮಾಡುತ್ತಾ ಮರಿಗಳ ಭಾಷೆಯನ್ನು ಕೊಟ್ಟು, ಪುನಃ ಅಧಿಕಾರಿಗಳ ಕಡೆಗೆ ತಿರುಗಬೇಕು. ಆಗ ಅವರು ಕಂಠವಸ್ತ್ರವನ್ನು ಅವನ ಕೊರಳಿಗೆ ಕಟ್ಟಿ, ಮರಿಯ ಪದಕವನ್ನು ಕೊಟ್ಟು, ಎಡಗೈಯಿಂದ ಹಸ್ತಲಾಘವವನ್ನು ಕೊಡುವರು. ಇದಾದಮೇಲೆ ಅವನು ಅಧಿಕಾರಿಗಳನ್ನೂ ಹಿರಿಯಣ್ಣನನ್ನೂ ಮೊದಲು ವಂದಿಸಿ ನಂತರ ತಿರುಗಿಕೊಂಡು ಗುಂಪನ್ನು ವಂದಿಸಬೇಕು. ಆಗ ಅವರೂ ವಂದಿಸುವರು. ಆಮೇಲೆ ನಾಯಕನೊಂದಿಗೆ ಹೋಗಿ ತನ್ನ ಪಂಗಡವನ್ನು ಸೇರಬೇಕು.

ಹುಡುಗರು ತಮ್ಮ ದೀಕ್ಷೆಯನ್ನು ತೆಗೆದುಕೊಂಡ ನಂತರ, ಅಧಿಕಾರಿಗಳು ಅವರನ್ನು ಕುರಿತು ಸಮಯೋಚಿತವಾದ ಒಂದೆರಡು ಮಾತುಗಳನ್ನಾಡುವರು. ಅದರ ಸ್ವಾರಸ್ಯವು ಇದು : ಮರಿಗಳ ಮಹಾ ಭ್ರಾತೃಮಂಡಲಿಗೆ ನಿಮ್ಮನ್ನು ಸೇರಿಸುತ್ತೇನೆ. ಈ ಭೂಮಂಡಲ ವ್ಯಾಪಿಯಾದ ಈ ಮಂಡಲಿಗೆ ನೀವೂ ಸದಸ್ಯರಾಗಿರುವಿರಿ. ಈ ಮಂಡಲಿಯ ಸದಸ್ಯತ್ವಕ್ಕೆ ಗೌರವ



ಶ್ರೀಮದ್ಯುವರಾಜರು ಅವರ ಕುಮಾರನಿಗೂ ಆತನ ಗೆಳೆಯರಿಗೂ ಮರಿಗಳ ದೀಕ್ಷೆಯನ್ನು ಕೊಡುತ್ತಿರುವುದು.

ತರುವ ರೀತಿಯಲ್ಲಿ ಮರಿಗಳೊಡನೆ ನೀವೂ ಸಹ ಈ ದಿನ ಹೊಸದಾಗಿ ಸೇರಿ ಅಣ್ಣತಮ್ಮಂದಿರ ಗುಂಪನ್ನು ದೊಡ್ಡದನ್ನಾಗಿ ಮಾಡಿ ಆಚರಿಸುವಿರೆಂದು ನನಗೆ ಧೃಡನಿಶ್ಚಯವಿದೆ. ಇಂದಿನಿಂದ ಮರಿಗಳ ಸಮರೂಪವನ್ನು ಧರಿಸುವ ಅರ್ಹತೆಯು ನಿಮಗೆ ದೊರಕಿದೆ; ನೀವು ಈ ಉಡುಪನ್ನು ಬಹಳ ಗೌರವದಿಂದ ಕಾಪಾಡುತ್ತಾ ಹಿರಿಯಣ್ಣನ ಅಪ್ಪಣೆಯಂತೆ ಘನ ಕಾರ್ಯಗಳಲ್ಲಿ ಮಾತ್ರ ಉಪಯೋಗಿಸಬೇಕು ; ನೀವೆಲ್ಲರೂ ಧೈರ್ಯಶಾಲಿಗಳೂ, ಸತ್ಯವಂತರೂ, ನಂಬಿಕಾರ್ಹರೂ ಆಗಿ ನಿಮ್ಮ ಶ್ರೇಯೋಭಿವೃದ್ಧಿಯನ್ನು ಮಾಡಿಕೊಳ್ಳುವುದಲ್ಲದೆ ದೇಶೋದ್ಧಾರಕ್ಕೂ ಸಹಾಯಕರಾಗಬೇಕೆಂದು ಒತ್ತಿ ಹೇಳುತ್ತೇನೆ.

ಈ ಸಮಾರಂಭವು ವೀರ ಘರ್ಜನೆ ಮತ್ತು ಕಾಯೌ ಶ್ರೀಗೌರಿಯಿಂದ ಮುಗಿಯುವುದು.



# ಒಂದು ತಾರೆ

---

## ಮೈಸೂರು ಧ್ವಜ

**ರಚನೆ**

ಇತರ ದೇಶಗಳ ಧ್ವಜಗಳಂತೆಯೇ ಮೈಸೂರು ಧ್ವಜಕ್ಕೂ ಚರಿತ್ರೆಯೂ ಮತ್ತು ಅದರ ಆಕಾರಕ್ಕೆ ಅನುಗುಣವಾದ ವಿಷಯಗಳೂ ಸೇರಿವೆ. ಈ ಧ್ವಜದಲ್ಲಿ ಮೂರು ಬಣ್ಣಗಳಿವೆ. ಒಂದೊಂದಕ್ಕೂ ಒಂದೊಂದು ಕಥೆಯುಂಟು.

ಹಿಂದೆ ನಮ್ಮ ಮಹಾರಾಜರ ವಂಶೀಕರಾದ ರಾಜ ಒಡೆಯರು ದಂಡಯಾತ್ರೆಗೆ ಹೊರಟಾಗ ಒಬ್ಬ ಶೈವ ಸನ್ಯಾಸಿಯು ಅವರಿಗೆ ದಾರಿಯಲ್ಲಿ ಸಿಕ್ಕಿದನು. ಒಡೆಯರು ಆತನಿಗೆ ಪ್ರಣಾಮಮಾಡಿದರು. ಆ ಸನ್ಯಾಸಿಯು ಇವರ ಇಂಗಿತವನ್ನು ತಿಳಿದು, ಹರಸಿ, ಕಾವೀಬಟ್ಟೆಯ ಒಂದು ತುಂಡನ್ನು ಕೊಟ್ಟು ಅದನ್ನು ಧ್ವಜಕ್ಕೆ ಹಾಕಿಕೊಂಡು ಹೋದರೆ ಅವರಿಗೆ ದಿಗ್ವಿಜಯವಾಗುವುದೆಂದು ಹೇಳಿದನು. ಅದೇಪ್ರಕಾರ ಮಾಡಲು ಜಯಶೀಲರೇ ಆದರು. ಒಡೆಯರು ಆ ಸನ್ಯಾಸಿಗೆ ತಮ್ಮ ಕೃತಜ್ಞತೆಯನ್ನು ತೋರಿಸಲೋಸುಗ ಅಂದಿನಿಂದ ತಮ್ಮ ಬಾವುಟವನ್ನು ಕಾವೀ ಬಣ್ಣದಲ್ಲಿ ಮಾಡಿಸಿ ಪ್ರತಿ ಶುಕ್ರವಾರವೂ ಅರಮನೆಯ ಮುಂದೆ ಏರಿಸುತ್ತಿದ್ದರು. ಕ್ರಮೇಣ ಇದು ಮಂಗಳಸೂಚಕವಾದ ಕುಂಕುಮ ಬಣ್ಣಕ್ಕೆ ಬದಲಾವಣೆಯಾಯಿತು. ಇದೇ ಈ ಬಾವುಟದ ಸುತ್ತಲೂ ಇರುವ ಕೆಂಪು ಬಣ್ಣಕ್ಕೆ ಕಾರಣ.

ಎರಡನೆಯದು ಹಳದಿ ಅಥವಾ ಅರಸಿನ ಬಣ್ಣ. ಅರಸಿನವನ್ನು ಕುಂಕುಮದೊಂದಿಗೆ ಶುಭಕಾರ್ಯಗಳಿಗೆ ಉಪಯೋಗಿಸುವುದರಿಂದ, ಶುಭವನ್ನು ಸೂಚಿಸುವುದಕ್ಕಾಗಿಯೇ ಈ ಬಣ್ಣಕ್ಕೆ ನಮ್ಮ ಬಾವುಟದಲ್ಲಿ ಜಾಗವಿರುವುದು.

ಬಿಳಿಯ ಬಣ್ಣವೇ ಮೂರನೆಯದು. ಶುಭ್ರತೆಯನ್ನು ತೋರಿಸುವುದಕ್ಕಾಗಿಯೇ ಇದಿರುವುದು.

ಇಷ್ಟು ಬಣ್ಣಗಳ ವಿಚಾರವಾಯಿತು. ಇನ್ನು ಚಿತ್ರದ ವಿಚಾರ. ಚಿತ್ರದ ಮೇಲ್ಭಾಗದಲ್ಲಿ ಒಂದು ಸಿಂಹ. ಅದರ ಬಾಯಿನಲ್ಲಿ ಒಂದು ಕೋಣದ ತಲೆ. ಇದರ ಕೆಳಗೆ ಒಂದು ಮುಖವಾಡದ ಆಕಾರವಿದೆ. ಮುಖವಾಡದ ಎರಡು ಕಡೆಗಳಲ್ಲಿಯೂ ಬೇಲುಗಳನ್ನು ಅಂದಕ್ಕಾಗಿ ಬಗ್ಗಿಸಿ



ಮೈಸೂರು ಧ್ವಜ.

ರುತ್ತಾರೆ. ಇದರ ಕೆಳಭಾಗದಲ್ಲಿ ಗುರಾಣಿಯ ಆಕಾರವೂ ಅದರೊಳಗೆ ಎರಡು ತಲೆಗಳುಳ್ಳ ಗಂಡಭೇರುಂಡ ಪಕ್ಷಿಯೂ ಇದೆ. ಪಕ್ಷಿಯ ಬಣ್ಣವು ಅಚ್ಚ ಬಿಳುಪು. ಈ ಗುರಾಣಿಯ ಆಕಾರದ ಎರಡು ಕಡೆಗಳಲ್ಲಿಯೂ ಎರಡು ಸೊಂಡಲಿರುವ ಸಿಂಹಗಳು ತಮ್ಮ ಮುಂದಿನ ಎರಡು ಕಾಲುಗಳನ್ನು ಗುರಾಣಿಯ ಮೇಲೆ ಊರಿಕೊಂಡು ನಿಂತಿವೆ. ಈ ಗುರಾಣಿಯ ಕೆಳಭಾಗದಲ್ಲಿ ಸಂಸ್ಕೃತ ಭಾಷೆಯ ಅಕ್ಷರಗಳಲ್ಲಿ 'ಸತ್ಯಮೇವೋದ್ಧರಾಮ್ಯಹಂ' ('ನಾನು ಸತ್ಯವನ್ನೇ ಕಾಪಾಡುತ್ತೇನೆ') ಎಂಬ ಶ್ರೀಮನ್ಮಹಾರಾಜರ

ಧ್ಯೇಯವಾಕ್ಯವು ಬರೆಯಲ್ಪಟ್ಟಿದೆ. ಇದರ ಸುತ್ತಲೂ ಅಂದಕ್ಕೋಸ್ಕರ ಬೇಲುಗಳು ಬಗ್ಗಿಸಲ್ಪಟ್ಟಿವೆ.

ಇವೆಲ್ಲವೂ ಯಾವ ಯಾವ ಕಾರಣಗಳಿಂದ ಚಿತ್ರಿಸಲ್ಪಟ್ಟಿವೆ? ಎಂಬುದಕ್ಕೆ ಸಂಬಂಧಪಟ್ಟ ಒಂದೆರಡು ಕಥೆಗಳಿವೆ. ಮೇಲುಗಡೆಯಲ್ಲಿ ಒಂದು ಸಿಂಹವು ಕೋಣದ ತಲೆಯನ್ನು ಬಾಯಿನಲ್ಲಿ ಕಚ್ಚಿಕೊಂಡು ಇರುವುದು ನಮ್ಮ ನಾಡಿಗೆ "ಮೈಸೂರು" ಎಂಬ ಹೆಸರು ಬರಲು ಕಾರಣವನ್ನು ಸೂಚಿಸುತ್ತದೆ. ಹಿಂದೆ ಇಲ್ಲಿ ಮಹಿಷಾಸುರನೆಂಬ ರಾಕ್ಷಸನು ರಾಜ್ಯವಾಳುತ್ತಿದ್ದನು. ಅವನ ಹಾವಳಿಯನ್ನು ತಡೆಯಲಾರದೆ ಪ್ರಜೆಗಳು ಶ್ರೀ ಚಾಮುಂಡೇಶ್ವರಿಗೆ ಮೊರೆಯಿಟ್ಟರು. ಭಕ್ತರ ಪ್ರಾರ್ಥನೆಯಂತೆ ಸಿಂಹಾರೂಢಳಾದ ಶ್ರೀ ಚಾಮುಂಡೇಶ್ವರಿಯು ಈಗಿರುವ ತನ್ನ ಹೆಸರಿನ ಬೆಟ್ಟದ ಬಳಿಯಲ್ಲಿ ಆ ರಾಕ್ಷಸನನ್ನು ಸಂಹರಿಸಿದಳು. ಅವನ ರುಂಡವು ನೆಲಕ್ಕೆ ಉರುಳಿದಮೇಲೆ ಆಕೆಯ ವಾಹನವಾದ ಸಿಂಹವು ಅದನ್ನು ಬಾಯಿನಲ್ಲಿ ಕಚ್ಚಿಕೊಂಡಿತು.

ಕೃತಯುಗದಲ್ಲಿ ಹಿರಣ್ಯಾಕ್ಷ, ಹಿರಣ್ಯಕಶಿಪು ಎಂಬ ಇಬ್ಬರು ರಾಕ್ಷಸರು ಹುಟ್ಟಿ ಎಲ್ಲರಿಗೂ ಬಹಳ ತೊಂದರೆಯನ್ನು ಕೊಡುತ್ತಿದ್ದರು. ಇವರ ಬಾಧೆಯನ್ನು ಸಹಿಸಲಾರದೆ ದೇವತೆಗಳು ಮಹಾ ವಿಷ್ಣುವಿಗೆ ಮೊರೆಯಿಟ್ಟರು. ಆಗ ಆತನು ವರಾಹಾವತಾರವನ್ನು ಎತ್ತಿ ಹಿರಣ್ಯಾಕ್ಷನನ್ನೂ, ನರಸಿಂಹಾವತಾರಮಾಡಿ ಹಿರಣ್ಯಕಶಿಪುವನ್ನೂ ಸಂಹರಿಸಿದನು.

ಉಗ್ರವಾದ ನರಸಿಂಹನ ಕೋಪಾಗ್ನಿಯಿಂದ ಲೋಕಗಳೆಲ್ಲವೂ ಸುಟ್ಟುಹೋಗುತ್ತಿರಲು ಆತನನ್ನು ಸಮಾಧಾನಪಡಿಸಲು ಮಹಾಲಕ್ಷ್ಮಿಯಿಂದಲೂ ಸಾಧ್ಯವಾಗಲಿಲ್ಲ. ಆಗ ದೇವತೆಗಳೆಲ್ಲರೂ ಭಯಭ್ರಾಂತರಾಗಿ ಪರಮೇಶ್ವರನಲ್ಲಿ ಮೊರೆಯಿಟ್ಟರು. ಆಗ ಈಶ್ವರನು ಶರಭಾವತಾರವನ್ನು ತಾಳಿ ನರಸಿಂಹನನ್ನು ಎದುರಿಸಲು, ನರಸಿಂಹನು ಶರಭಕ್ಕೆ ವೈರಿಯೂ

ಮತ್ತು ಅದಕ್ಕಿಂತ ಬಲಶಾಲಿಯೂ ಆದ ಗಂಡಭೇರುಂಡಾವತಾರವ ನ್ನೆತ್ತಿ ಆಗ ಉಂಟಾಗಿದ್ದ ಅಂಡವನ್ನು ಶಾಂತಿಗೊಳಿಸಿದನು. ಆದುದರಿಂದ ಗಂಡಬೇರುಂಡವು ಶ್ರೀ ಮಹಾವಿಷ್ಣುವಿನ ಅವತಾರವೆಂಬುದನ್ನು ಜ್ಞಾಪಕ ದಲ್ಲಿಡಿ. ಅದು ಅತ್ಯದ್ಭುತಶಕ್ತಿಮೂರ್ತಿ ಎಂಬುದನ್ನೂ ಮರೆಯದಿರಿ.

ಈ ಗಂಡಭೇರುಂಡವನ್ನು ವಿಜಯನಗರದ ಅರಸರು ತಮ್ಮ ನಾಣ್ಯ ಗಳ ಮೇಲೆ ಹಾಕಿಸುತ್ತಿದ್ದರು. ಕ್ರಿ. ಶ. ೧೬೧೦ರಲ್ಲಿ ಮೈಸೂರರಸರಿಗೆ ಶ್ರೀರಂಗಪಟ್ಟಣವು ಕೈಸೇರಿದಮೇಲೆ ಇವರು ಗಂಡಭೇರುಂಡವನ್ನು ತಮ್ಮ ಧ್ವಜದಲ್ಲಿ ಸೇರಿಸಿಕೊಂಡರು.

ಆನೆಯ ಮುಖ ಮತ್ತು ಸಿಂಹದ ಮೈ ಉಳ್ಳ ಈ ವಿಜಾತೀಯ ಮೃಗ ವನ್ನು ಕೆಲವರು 'ಶರಭ' ಎನ್ನುತ್ತಾರೆ. ಶರಭಕ್ಕೂ ಗಂಡಭೇರುಂಡಕ್ಕೂ ವೈರತ್ವವುಂಟೇ ಹೊರತು ಮೈತ್ರಿತ್ವವು ಎಂದಿಗೂ ಇಲ್ಲ. ಹೀಗಿರು ವಲ್ಲಿ ಇವೆರಡೂ ಜೊತೆಯಲ್ಲಿರುವುದು ಕೇವಲ ಅಸಂಭವ. ಈ ವಿಚಿತ್ರ ಮೃಗಗಳನ್ನು 'ಯಾಳಿ' ಎನ್ನುವರು. ಇವು ರಾಜ್ಯವನ್ನು ಕಾಪಾಡುವ ದೇವತೆಗಳು. ಈಗಲೂ ನಮ್ಮ ಮಹಾರಾಜರು ನವರಾತ್ರಿಯ ಕಾಲದಲ್ಲಿ 'ಯಾಳಿ ಪೂಜೆ' ಯನ್ನು ಮಾಡುತ್ತಾರೆ. ಗಂಡಭೇರುಂಡವೇ ಮೈಸೂರು ದೇಶ. ಇದನ್ನು ಈ ಯಾಳಿಗಳೆರಡೂ ಎರಡು ಕಡೆಗಳಲ್ಲಿಯೂ ನಿಂತು ಸಂರಕ್ಷಿಸುತ್ತವೆ ಎಂಬುದೇ ಇದರ ಅರ್ಥ.

## ಸಲ್ಲತಕ್ಕ ಮರ್ಯಾದೆ

ಗಂಡಭೇರುಂಡ ಧ್ವಜವು ಶ್ರೀಮನ್ಮಹಾರಾಜರವರನ್ನು ಪ್ರತ್ಯಕ್ಷ ಪಡಿಸುವುದರಿಂದಲೂ, ಅದರಲ್ಲಿ ಶ್ರೀ ಮಹಾವಿಷ್ಣುವೇ ಇರುವುದರಿಂದಲೂ ನಾವೆಲ್ಲರೂ ಅದಕ್ಕೆ ವಂದಿಸಬೇಕು ಮತ್ತು ಗೌರವವನ್ನು ಕೊಡ ಬೇಕು. ಅದನ್ನು ಆರೋಹಣ ಮತ್ತು ಅವರೋಹಣಮಾಡುವ ಕಾಲ ಗಳಲ್ಲಿ ಸರಿಯಾದ ಮರ್ಯಾದೆಗಳೊಂದಿಗೆ ಕಾರ್ಯಕ್ರಮಗಳನ್ನು

ನಡೆಯಿಸಬೇಕು. ಆರೋಹಣ ಮಾಡುವಾಗ ತಲೆಕೆಳಗಾಗದಂತೆ ಬಹಳ ಎಚ್ಚರಿಕೆಯಿಂದಿರಬೇಕು ; ಏಕೆಂದರೆ ಇದು ಆಪತ್ಸೂಚಿಕ ಚಿನ್ಹೆ. ಅಲ್ಲದೆ ಅದನ್ನು ಧ್ವಜಸ್ತಂಭದ ಅರ್ಧದಲ್ಲಿ ನಿಲ್ಲಿಸಬಾರದು; ಇದು ವ್ಯಸನ ಸೂಚಕ ಚಿನ್ಹೆ. ಅವರೋಹಣ ಕಾಲದಲ್ಲಿ ಶ್ರೀಮನ್ಮಹಾರಾಜರವರ ಶ್ರೇಯಃಪ್ರಾರ್ಥನೆಯನ್ನು ಮಾಡಬೇಕು. ಯಾವ ಕಾರಣದಿಂದಲೆ ಆಗಲಿ ಅಥವಾ ಧೋರಣೆಯಿಂದಲೆ ಆಗಲಿ ಧ್ವಜವನ್ನು ನೆಲದಮೇಲೆ ಹಾಕ ಕೂಡದು. ಇಷ್ಟೇ ಅಲ್ಲ! ಮಳೆಯಲ್ಲಿ ನೆನೆಸಬಾರದು, ಸೂರ್ಯ ಅಸ್ತಮಯವಾದ ಮೇಲೆ ಹಾರಗೊಡಿಸಬಾರದು. ಧ್ವಜವೇ ಶ್ರೀಮನ್ಮಹಾರಾಜರ ಪ್ರತಿನಿಧಿಯೆಂದು ಬಗೆದು, ಅವರಿಗೆ ಸಲ್ಲಬೇಕಾದ ಸಕಲೋಪಚಾರಗಳೂ ಈ ಧ್ವಜಕ್ಕೆ ಸಲ್ಲಬೇಕೆಂಬುದನ್ನು ಪ್ರತಿ ಮೈಸೂರು ದೇಶೀಯನೂ ತಿಳಿದಿರಬೇಕಾದ ವಿಷಯ.

ಬರೀ ಗಂಡಭೇರುಂಡವಿರುವ ಧ್ವಜವನ್ನು ಅರಮನೆಯ ಮೇಲೂ ಮತ್ತು ಅರಮನೆಗೆ ಸೇರಿದ ಕಟ್ಟಡಗಳ ಮೇಲೂ ಹಾರಿಸುವರು.

## ಗಂಟುಗಳು

ಸೇತುವೆ, ಗುಡಿಸಲು, ಧ್ವಜಸ್ಥಂಭ ಇವುಗಳನ್ನು ಕಟ್ಟುವುದರಲ್ಲಿಯೂ ಇನ್ನೂ ಅನೇಕ ಇತರ ಕೆಲಸಗಳಲ್ಲಿಯೂ ಹಗ್ಗದ ಗಂಟುಗಳನ್ನು ಸರಿಯಾಗಿ ಹಾಕಬೇಕಾಗುತ್ತದೆ. ಇದಕ್ಕಾಗಿ ಸ್ಕೌಟುಗಳು ಎಂಟು ಬಗೆಯ ಗಂಟುಗಳನ್ನು ಕಲಿಯುತ್ತಾರೆ. ಆದರೆ ಅವುಗಳಲ್ಲಿ ಮರಿಗಳು ಕಲಿಯಬೇಕಾದುದು ನಾಲ್ಕೇ.

ಗಂಟು ಹಾಕುವುದೇನು ಮಹ. ನಮಗೇನು ಹಗ್ಗಗಳನ್ನು ಗಂಟು ಹಾಕುವುದಕ್ಕೆ ಬರುವುದಿಲ್ಲವೋ. ಹಗ್ಗ ಕೊಟ್ಟು ನೋಡಿ, ಒಬ್ಬರಿಗೂ ಬಿಚ್ಚುವುದಕ್ಕಾಗದ ಹಾಗೆ ಗಂಟುಗಳನ್ನು ಹಾಕಿಬಿಡುತ್ತೇವೆ, ಎಂದು

ಅನೇಕ ಹುಡುಗರು ಹೇಳಿರುವುದನ್ನು ನಾನು ಕೇಳಿದ್ದೇನೆ. ಆದರೆ ಗಂಟು ಗಳನ್ನು ಹಾಕುವುದೆಂದರೆ ಹೀಗಲ್ಲ. ಗಂಟುಗಳಲ್ಲಿ ಒಳ್ಳೆಯ ಪ್ರಯೋಜನಕಾರಿಯಾದ ಮತ್ತು ಕೆಟ್ಟ, ಅಪ್ರಯೋಜನಕಾರಿಯಾದ ಗಂಟುಗಳೂ ಉಂಟು. ಗಟ್ಟಿಯಾಗಿ ಎಳೆದಾಗ ಜಾರಿಹೋಗುವ ಇಲ್ಲವೆ ಅದುಮಿ ಹೋಗುವ ಗಂಟು ಕೆಟ್ಟದು ; ಎಳೆದಷ್ಟೂ ಬಿಗಿಯಾಗುತ್ತಾ ಸುಲಭವಾಗಿ ಬಿಚ್ಚುವುದಕ್ಕೆ ಬರುವ ಗಂಟು ಒಳ್ಳೆಯದು.

ಆದುದರಿಂದ ಮರಿಗಳು ಸರಿಯಾಗಿ ಗಂಟುಗಳನ್ನು ಹಾಕುವುದನ್ನೂ ಅವುಗಳ ಉಪಯೋಗಗಳನ್ನೂ ಕಲಿಯಬೇಕು. ಯಾವ ಯಾವ ಗಂಟು ಗಳನ್ನು ಎಲ್ಲೆಲ್ಲಿ ಉಪಯೋಗಿಸಬೇಕೆಂಬ ತಿಳುವಳಿಕೆಯೂ ಅವಶ್ಯಕ. ಆದುದ ರಿಂದ ಅವುಗಳ ಉಪಯೋಗಗಳನ್ನು ಇಲ್ಲಿ ತಿಳಿಸಿದೆ.

## ೧. ಸಮ ಗಂಟು (Reef knot)

ಇದನ್ನು 'ಚೌಕದ ಗಂಟು' ಎಂದೂ ಕರೆಯಬಹುದು. ಎರಡು ಹಗ್ಗಗಳನ್ನು ಒಂದಾಗಿ ಕಟ್ಟುವುದಕ್ಕೂ, ಒಂದೇ ಹಗ್ಗದ ಎರಡು ತುದಿಗಳನ್ನು ಸೇರಿಸುವುದಕ್ಕೂ ಉಪಯುಕ್ತವಾಗಿದೆ. ಗಾಯಗಳಿಗೆ ಚಿಕಿತ್ಸೆ ಮಾಡಿದ ನಂತರ



ಬಟ್ಟೆಯನ್ನು ಸುತ್ತಿ, ಕೊನೆಯಲ್ಲಿ ಬಟ್ಟೆಯ ಎರಡು ಅಂಚುಗಳನ್ನೂ ಕಟ್ಟುವಾಗ ಈ ಗಂಟನ್ನು ಹಾಕಬೇಕು. ಇದು ಬಿಚ್ಚುವುದಕ್ಕೆ ಸುಲಭ ವಾಗಿರುವುದಲ್ಲದೆ ಭದ್ರವಾಗಿಯೂ ಇರುತ್ತದೆ ; ಅಲ್ಲದೆ ಗಾಯಕ್ಕೆ ಒತ್ತಿ ನೋಯಿಸುವುದಿಲ್ಲ. ಈ ಗಂಟನ್ನು ವಿಶೇಷವಾಗಿ ಉಪಯೋಗಿಸಬೇಕಾಗಿ ರುವುದರಿಂದ ಕಣ್ಣು ಮುಚ್ಚಿಕೊಂಡೂ, ಬೆನ್ನ ಹಿಂದೆಯೂ, ಎಲ್ಲಿ ಯಾವಾಗ ಕೇಳಿದರೆ ಅಲ್ಲಿ ಆವಾಗ ಹಾಕುವ ಸಾಮರ್ಥ್ಯವಿರಬೇಕು.

## ೨. ಮೂಲೆ ಗಂಟು (Sheet bend)

ಇದನ್ನು 'ಇರ್ತಂಡದ ಗಂಟು' ಎಂದೂ ಕರೆಯಬಹುದು. ಬೇರೆ ಬೇರೆ ದಪ್ಪಗಳುಳ್ಳ ಎರಡು ಹಗ್ಗಗಳನ್ನು ಜಾರದಂತೆ ಕಟ್ಟುವಾಗ ಈ ಗಂಟನ್ನು ಹಾಕಬೇಕು. ಈ ಗಂಟನ್ನೇ ಎರಡು ಸಾರ್ತಿ ಹಾಕಿದರೆ ಹಗ್ಗಗಳು ಒದ್ದೆಯಾಗಿದ್ದರೂ ಸೆಳೆದಷ್ಟೂ ಗಂಟು ಭದ್ರವಾಗಿ ನಿಲ್ಲುವುದು.



## ೩. ಕೊಟ್ಟಿಗೆ ಗಂಟು (Clove hitch)

ಇದು ಗೂಟಕ್ಕೆ ಕಟ್ಟುವ ಗಂಟು. ಕೊಟ್ಟಿಗೆಯಲ್ಲಿ ದನಕರುಗಳನ್ನು ಕಟ್ಟುವಾಗ ಸಾಮಾನ್ಯವಾಗಿ ಈ ಗಂಟನ್ನೇ ಹಾಕುವರು. ಇದು ಬಿಚ್ಚುವುದಕ್ಕೆ ಸುಲಭವಾಗಿರುವುದಲ್ಲದೆ ಎಳೆದಷ್ಟೂ ಬಿಗಿಯಾಗುತ್ತದೆ. ಸೇತುವೆ, ಗುಡಿಸಲು, ಧ್ವಜಸ್ಥಂಭ ಇವುಗಳನ್ನು ಕಟ್ಟುವುದರಲ್ಲಿ ಉಪಯೋಗಕ್ಕೆ ಬರುತ್ತದೆ.



## ೪. ಬೆಸ್ತರ ಗಂಟು (Fisherman's Knot)

ಬೆಸ್ತರು ಸರ್ವಸಾಮಾನ್ಯವಾಗಿ ಈ ಗಂಟನ್ನು ಉಪಯೋಗಿಸುವುದರಿಂದಲೇ ಇದಕ್ಕೆ ಈ ಹೆಸರು. ಒದ್ದೆಯಾದ ಅಥವಾ ಬೇರೆಬೇರೆ ದಪ್ಪಗಳುಳ್ಳ ಎರಡು ಹಗ್ಗಗಳನ್ನು ಜೋಡಿಸಿ ಕಟ್ಟುವುದಕ್ಕೆ ಇದು ಸಹಕಾರಿಯಾಗಿದೆ. ಈ ಗಂಟನ್ನು ಸುಲಭವಾಗಿ ಹಾಕಲೂ ಬಹುದು, ಬಿಚ್ಚಲೂ ಬಹುದು.



# ಅಂಗಸಾಧನೆ

## ಪಲ್ಟಿ ಹೊಡೆಯುವುದು

ಮರಿಗಳಿಗೆಲ್ಲಾ ಪಲ್ಟಿ ಹೊಡೆಯುವುದಕ್ಕೆ ಬಂದಿರಬೇಕು. ಯಾರಿ





ಗಾದರೂ ಇನ್ನೂ ಬರದಿದ್ದರೆ ಕೂಡಲೆ ಕಲಿತುಕೊಳ್ಳಬೇಕು. ಏಕೆಂದರೆ ಒಂದು ತಾರೆ ಮರಿಯಾಗಲು ಅದು ಬಹಳ ಮುಖ್ಯ.

ಪಲ್ಟಿ ಹೊಡೆಯುವಾಗ ಅಥವಾ ಲಾಗ ಹಾಕುವಾಗ ಯಾವುದಾದರೊಂದು ರೀತಿಯಲ್ಲಿ ಹಾಕಿದರೆ ಸಾಲದು. ನೋಡುವವರಿಗೆ ಲಕ್ಷಣವಾಗಿ ಕಾಣುವಂತೆ ನಾನಾ ತರಹಗಳಲ್ಲಿ ಮಾಡಬೇಕು.

## ಕುಪ್ಪಳಿಸುವುದು

ಕುಪ್ಪಳಿಸುವುದನ್ನು ಅಭ್ಯಾಸದಿಂದ ಕಲಿಯಬೇಕು. ಪ್ರಾರಂಭದಲ್ಲಿ ಕುಳ್ಳಾಗಿರುವವನ, ನಂತರ ತನ್ನಷ್ಟೇ ಎತ್ತರವಿರುವವನ, ಆ ಮೇಲೆ ತನಗಿಂತಲೂ ಎತ್ತರವಾಗಿರುವವನ ಮೇಲೆ ಕುಪ್ಪಳಿಸುವುದನ್ನು ಅಭ್ಯಾಸ ಮಾಡಬೇಕು. ಒಬ್ಬನು ಕುಪ್ಪಳಿಸುವಾಗ ಅವನ ಮುಂದಿನವನು ಅವನಿಗೆ



ಅಡ್ಡಲಾಗಿನಿಂತು, ಬಗ್ಗಿಕೊಂಡು, ತನ್ನ ತಲೆಯನ್ನು ಒಳಗಡೆಗೆ ಬಗ್ಗಿಸ ಬೇಕು; ಮತ್ತು ಕೈಗಳಿಂದ ಕಾಲುಗಳನ್ನು ಭದ್ರವಾಗಿ ಹಿಡಿದುಕೊಳ್ಳ ಬೇಕು. ಕುಪ್ಪಳಿಸುವಾಗ ನೋಡುವವರಿಗೆ ವಿಕಾರವಾಗಿ ಕಾಣಬಾರದು; ಮುಂದಿನವನ ಮೇಲೆ ಸ್ವಲ್ಪವೂ ಭಾರವನ್ನು ಹಾಕಕೂಡದು.

ಗಾಲೀ ಚಕ್ರವನ್ನಾಡಿಸುವುದು, ಒಂಟಿ ಕಾಲಿನಲ್ಲಿ ತರಹೇವಾರಿ ಮುಖ್ಯವಾಗಿ ∞ ಈ ಆಕಾರದಲ್ಲಿ ಕುಂಟುವುದನ್ನು ಚೆನ್ನಾಗಿ ಅಭ್ಯಾಸ ಮಾಡಬೇಕು.

## ಚೆಂಡನ್ನು ಎಸೆಯುವುದು—ಹಿಡಿದುಕೊಳ್ಳುವುದು

ಚೆಂಡನ್ನು ಎಸೆಯುವುದು, ಎಸೆದುದನ್ನು ಹಿಡಿದುಕೊಳ್ಳುವುದು ಇವೂ ವಿದ್ಯೆಗಳೇ. ಎದುರಿಗಿರುವವನಿಗೆ ಅವನು ಹಿಡಿಯುವುದಕ್ಕೆ ಅನುಕೂ ಲವಾಗುವಂತೆ ಚೆಂಡನ್ನು ಎಸೆಯುವುದು ಅವನು ಎಸೆದುದನ್ನು ಹಿಡಿದು



ಕೊಳ್ಳುವುದು ಇವನ್ನು ಅಭ್ಯಾಸಮಾಡಬೇಕು. ಮೊದಲು ಮೊದಲು ಎರಡು ಕೈಗಳಿಂದಲೂ ಆಮೇಲೆ ಒಂದೇ ಕೈನಲ್ಲಿಯೂ ಎಸೆಯುವುದನ್ನೂ ಹಿಡಿದು ಕೊಳ್ಳುವುದನ್ನೂ ಕಲಿಯಬೇಕು.

### ಹಗ್ಗದಿಂದ ಕುಣಿಯುವುದು

ಹಗ್ಗವನ್ನು ಯಾವಾಗಲೂ ಹಿಂದಿನಿಂದ ತಂದೇ ಕುಣಿಯಬೇಕು. ಮುಂದಿನಿಂದ ತಂದು ಕುಣಿಯುವುದು ಒಳ್ಳೆಯದಲ್ಲ. ಕುಣಿಯುವಾಗ ಕಾಲುಗಳನ್ನು ಜೋಡಿಸಿರಬೇಕು. ಶಬ್ದವಾಗದಂತೆ ಕಾಲುಗಳನ್ನು ಬಡಿಯಬೇಕು.

### ಪುಸ್ತಕಗಳನ್ನು ತಲೆಯ ಮೇಲೆ ಇಟ್ಟುಕೊಂಡು ಓಡುವುದು

ಇದು ಮೊದಲು ಮೊದಲು ಕಷ್ಟವಾಗಿ ಕಂಡು ಬಂದರೂ ಅಭ್ಯಾಸದಿಂದ ಕೇವಲ ಸುಲಭವೇ ಆಗುವುದು. ಮೊದಲು ಕೈಯಲ್ಲಿ ಹಿಡಿದುಕೊಂಡು ಅಭ್ಯಾಸಿಸಿದರೆ ಆಮೇಲೆ ಹಿಡಿಯದೇ ಹೊತ್ತುಕೊಂಡು ಹೋಗಬಹುದು.

## ಶುಚಿತ್ವ

### ಕೈಕಾಲುಗಳು

ಕೈ ಮತ್ತು ಕಾಲುಗಳನ್ನು ಯಾವಾಗಲೂ ಶುಚಿಯಾಗಿಟ್ಟುಕೊಂಡಿರಬೇಕು. ನಾವು ನಮ್ಮ ಕೈಗಳಿಂದ ಅನೇಕ ಕೆಲಸಗಳನ್ನು ಮಾಡುತ್ತೇವೆ. ಹೀಗೆ ಮಾಡುವಾಗಲೆಲ್ಲಾ ನಮ್ಮ ಕೈಗಳಲ್ಲಿ ಕೊಳೆ ಸೇರುವುದು. ನಾವು ಇದನ್ನು ತೊಳೆದು ಚೊಕ್ಕಟವಾಗಿಟ್ಟುಕೊಳ್ಳದಿದ್ದರೆ ನೋಡುವವರಿಗೆ ಅಸಹ್ಯವಾಗುವುದಲ್ಲದೆ, ನಾವು ಊಟಮಾಡುವಾಗ ಈ ಕೊಳೆಗಳೆಲ್ಲವೂ ನಮ್ಮ ಶರೀರಕ್ಕೆ ಸೇರಿ, ನಮಗೆ ನಾನಾ ವಿಧವಾದ ರೋಗಗಳನ್ನು ಉಂಟುಮಾಡುವುವು. ಆದುದರಿಂದ ಕೈಗಳನ್ನು ಯಾವಾಗಲೂ ಶುಭ್ರವಾಗಿಟ್ಟುಕೊಂಡಿರಬೇಕು; ಕಾಲುಗಳನ್ನೂ ಹಾಗೆಯೇ. ಕೆಲಸಮಾಡಿ ಕೈಗಳಲ್ಲಿ ಕೊಳೆ ಸೇರಿದರೆ, ನಡೆದು ಕಾಲುಗಳಲ್ಲಿ ಕೊಳೆ ಸೇರುತ್ತದೆ. ಆದುದರಿಂದ ಬರೀ ಕಾಲಿನಲ್ಲಿ ನಡೆಯುವುದು ಕೆಟ್ಟದು. ಪಾದರಕ್ಷೆಗಳನ್ನು ಉಪಯೋಗಿಸುವುದರಿಂದ ಆರೋಗ್ಯಕ್ಕೆ ಅನುಕೂಲವು ಅಧಿಕ.

## ಉಗುರುಗಳು

ಕೈ ಮತ್ತು ಕಾಲುಗಳ ಬೆರಳುಗಳಲ್ಲಿ ಉಗುರುಗಳು ಹೆಚ್ಚು ಬೆಳೆಯ ದಂತೆ ನೋಡಿಕೊಳ್ಳಬೇಕು. ಏಕೆಂದರೆ ಆಟವಾಡುವಾಗಲೂ, ಕೆಲಸಮಾಡು ವಾಗಲೂ ಈ ಉಗುರು ಸಂದುಗಳಲ್ಲಿ ಕಲ್ಮಷಗಳು ಸೇರಿಕೊಳ್ಳುತ್ತವೆ. ಈ ಕಲ್ಮಷಗಳಲ್ಲಿ ಕಣ್ಣಿಗೆ ಕಾಣದಂತಹ ಸಹಸ್ರಾರು ಕ್ರಿಮಿಗಳು ಸೇರಿಕೊಂ ಡಿರುತ್ತವೆ. ಅವುಗಳನ್ನು ಹಾಗೆಯೇ ಬಿಟ್ಟರೆ ಅವು ನಮ್ಮ ಆಹಾರ ದೊಂದಿಗೆ ಹೊಟ್ಟೆಗೆ ಹೋಗಿ ನಮಗೆ ರೋಗಗಳನ್ನು ಉಂಟುಮಾಡು ವುವು. ಇದೂ ಅಲ್ಲದೆ ಉಗುರುಗಳು ಹೆಚ್ಚಾಗಿ ಬೆಳದಿದ್ದರೆ ನೋಡುವು ದಕ್ಕೆ ಅಸಹ್ಯವಾಗಿಯೂ ಕಾಣುತ್ತವೆ. ಆದುದರಿಂದ ಆಗಾಗ್ಗೆ ಅವುಗಳನ್ನು ಸರಿಯಾಗಿ ಕತ್ತರಿಸಿ ಚೊಕ್ಕಟವಾಗಿಟ್ಟುಕೊಳ್ಳಬೇಕು. ಕೆಲವು ಹುಡುಗರು ಉಗುರುಗಳನ್ನು ಹಲ್ಲುಗಳಿಂದ ಕಚ್ಚುತ್ತಾರೆ. ಇದು ಬಹಳ ಅಪಾಯ ಮತ್ತು ಅಸಹ್ಯಕರ. ಎಂಜಲಿನಿಂದ ಕೂಡಿದ ಆ ಉಗುರುಗಳಿಗೆ ಯಾವು ದಾದರೂ ರೋಗವು ಪ್ರಾಪ್ತವಾಗುವುದಲ್ಲದೆ ಅಂಥವರನ್ನು ನೋಡಿದರೆ ಯಾರಿಗೆ ತಾನೇ ಅಸಹ್ಯವಾಗುವುದಿಲ್ಲ! ಅಂಥವರು ಈ ದುರಭ್ಯಾಸವನ್ನು ಹೇಗಾದರೂ ಮಾಡಿ ಬಿಟ್ಟು ಬಿಡಬೇಕು.

## ಹಲ್ಲುಗಳು

ಬಾಯಿ ಮತ್ತು ಹಲ್ಲುಗಳ ವಿಚಾರದಲ್ಲಿ ಬಹಳ ಎಚ್ಚರಿಕೆಯು ಅವ ಶ್ಯಕ. ಯಾರು ಹಲ್ಲುಗಳನ್ನು ಚೊಕ್ಕಟವಾಗಿಟ್ಟುಕೊಳ್ಳುವರೋ ಅವರು ಬಹುಕಾಲ ಆರೋಗ್ಯವಂತರಾಗಿ ಬಾಳುವರೆಂಬುದರಲ್ಲಿ ಯಾವ ಸಂದೇ ಹವೂ ಇಲ್ಲ. ನಾವು ತೆಗೆದುಕೊಳ್ಳುವ ಆಹಾರವು ಚೆನ್ನಾಗಿ ಜೀರ್ಣವಾಗ ಬೇಕಾದರೆ ಮೊದಲು ಸಹಾಯವು ಹಲ್ಲುಗಳಿಂದಲೇ. ಹಲ್ಲುಗಳು ನಾವು ಬಾಯಿಗೆ ಹಾಕಿಕೊಂಡ ಆಹಾರವನ್ನು ಬಾಯಿನಲ್ಲಿ ಉತ್ಪತ್ತಿಯಾಗುವ ಜೊಲ್ಲಿನ ಸಹಾಯದಿಂದ ಚೆನ್ನಾಗಿ ಅಗಿದು, ನುಣ್ಣಗೆ ಮಾಡಿ, ಅದು ಸುಲಬ

ವಾಗಿ ಗಂಟಲಿನಲ್ಲಿ ಹೋಗುವ ಹಾಗೆ ಮಾಡುತ್ತವೆ. ಆದುದರಿಂದ ಹಲ್ಲುಗಳು ತಮ್ಮ ಕೆಲಸವನ್ನು ಸರಿಯಾಗಿ ಮಾಡಲು ಗಟ್ಟಿಯಾಗಿಯೂ, ಶುಭ್ರವಾಗಿಯೂ ಇರಬೇಕು. ಹಲ್ಲು ಸಂದುಗಳಲ್ಲಿ ಸೇರಿರುವ ಆಹಾರದ ಚೂರುಗಳನ್ನು ಅವು ಅಲ್ಲೇ ನಿಂತು ಕೊಳೆಯದಂತೆ ಕಡ್ಡಿಯಿಂದ ಕೆದಕಿ ಹೊರಕ್ಕೆ ತೆಗೆದು ಹಾಕಬೇಕು. ಹಲ್ಲುಗಳನ್ನು ಪ್ರತಿನಿತ್ಯವೂ ಬ್ರಷ್ ಅಥವಾ ಕಡ್ಡಿಯಿಂದ ಉಜ್ಜಬೇಕು. ಉಜ್ಜಲು ಹಲ್ಲು ಪುಡಿಯನ್ನಾಗಲಿ, ಇದ್ದಲು ಪುಡಿಯನ್ನಾಗಲಿ ಉಪಯೋಗಿಸಬಹುದು. ಪರಿಶುದ್ಧವಾದ ನೀರಿನಿಂದ ಹಲ್ಲುಗಳನ್ನೂ, ನಾಲಿಗೆಯನ್ನೂ ಚೆನ್ನಾಗಿ ತೊಳೆದು ಬಾಯನ್ನು ಮುಕ್ಕಳಿಸಬೇಕು. ಉಪ್ಪು ಕರಗಿದ ನೀರಿನಿಂದ ಆಗಾಗ್ಯೆ ಬಾಯನ್ನು ಮುಕ್ಕಳಿಸುವುದು ಒಳ್ಳೆಯದು.

**ಉಸಿರಾಡುವುದು**

ನಿರ್ಮಲವಾದ ಗಾಳಿಯನ್ನೇ ಯಥೇಚ್ಛವಾಗಿ ಸೇವಿಸಬೇಕು. ಯಾವಾಗಲೂ ಮೂಗಿನಿಂದಲೇ ಉಸಿರನ್ನು ಎಳೆದುಕೊಳ್ಳಬೇಕು. ಬಾಯಿನಲ್ಲಿ ಸೇವಿಸುವುದು ಬಹಳ ಕೆಟ್ಟದು. ಏಕೆಂದರೆ ಹೊರಗಿನ ವಾಯುವಿನಲ್ಲಿ ನಮ್ಮ ಕಣ್ಣಿಗೆ ಕಾಣದ ಎಷ್ಟೋ ಕ್ರಿಮಿಗಳೂ, ಕಲ್ಮಷಗಳೂ ಇರುತ್ತವೆ. ಇವುಗಳನ್ನು ತಡೆಯಲು ಮೂಗಿನಲ್ಲಿರುವ ಏರ್ಪಾಡುಗಳು ಬಾಯಿನಲ್ಲಿಲ್ಲ. ಮೂಗಿನಲ್ಲಿ ಜಿಗಿಯಾಗಿರುವ ದ್ರವವೂ, ಸಣ್ಣಸಣ್ಣ ಕೂದಲುಗಳೂ ಈ ಕ್ರಿಮಿಗಳನ್ನೂ, ಕಲ್ಮಷಗಳನ್ನೂ ತಡೆಯುವುದಕ್ಕಾಗಿಯೇ ಇರುವುವು. ಬಾಯಿನಲ್ಲಿ ಉಸಿರನ್ನು ತೆಗೆದುಕೊಳ್ಳುವುದರಿಂದ ಈ ಕ್ರಿಮಿಗಳೂ ಕಲ್ಮಷಗಳೂ ಹೊಟ್ಟೆಗೆ ಸೇರಿ ರೋಗಗಳಿಗೆ ಕಾರಣವಾಗುತ್ತವೆ. ಬೇಕಾದರೆ ಬಾಯಿನಿಂದ ಉಸಿರನ್ನು ಹೊರಕ್ಕೆ ಬಿಡಬಹುದು.

ಮನುಷ್ಯ ಸೃಷ್ಟಿಯಲ್ಲಿ ಉಸಿರಾಡುವುದಕ್ಕೆ ಮೂಗೂ, ಆಹಾರವನ್ನು ತೆಗೆದುಕೊಳ್ಳುವುದಕ್ಕೆ ಬಾಯೂ ಏರ್ಪಾಟಾಗಿವೆ ಮತ್ತು ಅವುಗಳಿಗೆ ಏರ್ಪಡಿಸಿರುವ ಕೆಲಸಗಳನ್ನು ಅವು ಮಾಡಲು ಅವುಗಳಲ್ಲಿ ಸರಿಯಾದ

ಸಲಕರಣೆಗಳಿವೆ. ಅದು ಬಿಟ್ಟು ಮೂಗಿನ ಕೆಲಸವನ್ನು ಬಾಯೂ, ಬಾಯಿನ ಕೆಲಸವನ್ನು ಮೂಗೂ ಮಾಡಿದರೆ ಯದ್ಭಾವಂ ತದ್ಭವಿಷ್ಯತಿ.

ಮೂಗಿನಿಂದಲೇ ಉಸಿರಾಡುವುದರಿಂದ ಆಗುವ ಪ್ರಯೋಜನಗಳಲ್ಲಿ ಇವು ಕೆಲವು:

೧. ರೋಗಕಾರಕ ಕ್ರಿಮಿಗಳೂ, ಕಲ್ಮಷಗಳೂ ಹೊಟ್ಟೆಗೆ ಸೇರುವುದಿಲ್ಲ.

೨. ಕೆಲಸ ಮಾಡುವಾಗ ಬೇಗನೆ ಆಯಾಸವೂ, ಬಾಯಾರಿಕೆಯೂ ತೋರುವುದಿಲ್ಲ.

೩. ಗಂಟಲಿನಲ್ಲಿ 'ಎಡಿನಾಯಿಡ್ಸ್' ಎಂಬ ಜಾಡ್ಯವು ಬರುವುದಕ್ಕೆ ಅವಕಾಶವಿರುವುದಿಲ್ಲ.

೪ ನಿದ್ರಿಸುವಾಗ ಗೊರಿಕೆ ಹೊಡೆಯುವ ದುರಭ್ಯಾಸವು ಬರುವುದಿಲ್ಲ.

೫ ವಾಸನೆಯನ್ನು ಕಂಡುಹಿಡಿಯುವುದರಲ್ಲಿ ಮೂಗು ಬಹಳ ಚುರುಕಾಗಿರುತ್ತದೆ.

## ಘಂಟೆಯನ್ನು ಹೇಳುವುದು

ಮರಿಗಳು ಗಡಿಯಾರವನ್ನು ನೋಡಿ ಸರಿಯಾಗಿ ಘಂಟೆಯನ್ನು ಹೇಳುವುದನ್ನು ಕಲಿತಿರಬೇಕು. ಅನೇಕರಿಗೆ ಇದು ಬರುವುದಿಲ್ಲ. ಆದರೆ ಅದನ್ನು ಇಲ್ಲಿ ಬರೆದು ತಿಳಿಸುವುದು ಸಾಧ್ಯವಲ್ಲ. ಹಿರಿಯಣ್ಣಂದಿರಿಂದ ಹೇಳಿಸಿಕೊಳುವುದಲ್ಲದೆ, ಮನೆಯಲ್ಲಿಯೇ ಗಡಿಯಾರಗಳಿರತಕ್ಕವರು ಅವಕಾಶ ಸಿಕ್ಕಿದಾಗ ತಿಳಿದುಕೊಳ್ಳಬೇಕು.

## ಸೇವೆ

ಕೋಮಲಪಾದದ ಪದಕವು ಬಂದಲಾಗಾಯ್ತು ಒಂದು ತಾರೆಯು ಬರುವುದರೊಳಗೆ ಮರಿಯು ಕಡೇ ಪಕ್ಷ ಮೂರು ತಿಂಗಳಾದರೂ ಸೇವೆ ಮಾಡಿರಬೇಕು.

ಗುಂಪಿನ ಸಮಾರಂಭಗಳಿಗೆ ಮರಿಗಳ ಹಾಜರಾತಿಯು ಅವಶ್ಯಕ. ಗುಂಪಿನ ಕಾರ್ಯಕ್ರಮಗಳಲ್ಲಿ ಅವರವರ ಭಾಗಗಳನ್ನು ಸರಿಯಾಗಿ ಮಾಡಿರಬೇಕು. ಗುಂಪಿನ ಮರ್ಯಾದೆಯನ್ನು ಉಳಿಸಬೇಕಾಗಿರುವುದು ಮರಿಗಳ ಕರ್ತವ್ಯ. ಉಡುಪುಗಳನ್ನು ಧರಿಸುವುದರಲ್ಲಿ ಅಚ್ಚುಕಟ್ಟಿರಬೇಕು. ಬಟ್ಟೆಗಳು ಶುಭ್ರವಾಗಿರಬೇಕು. ಗುಂಪಿನವರೆಲ್ಲರೂ ಯಾವಾಗಲೂ ಒಟ್ಟುಗೂಡಿ ಕೆಲಸಮಾಡಿ, ಗುಂಪಿಗೆ ಒಳ್ಳೆಯ ಹೆಸರನ್ನು ತರಬೇಕು.

ಕೊಟ್ಟ ಕೆಲಸಗಳನ್ನು ಶ್ರದ್ಧೆಯಿಂದ ಮಾಡಬೇಕು. ಅಷ್ಟು ನೂಡಿದಲ್ಲಿ ಗುಂಪಿಗೆ ಸೇವೆಯನ್ನು ಮಾಡಿದಂತಾಗುತ್ತದೆ. ಈ ಮೂರು ತಿಂಗಳುಗಳಲ್ಲಿ ಮರಿಗಳ ಸೇವೆಯೂ, ನಡತೆಯೂ, ಕೆಲಸಕಾರ್ಯಗಳೂ ಸಮರ್ಪಕವಾಗಿರುವುವೆಂದು ಹಿರಿಯಣ್ಣನ ಮನಸ್ಸಿಗೆ ತಿಳಿಯಬೇಕು. ಮುಖ್ಯವಾಗಿ ನಡತೆಯು ಸರಿಯಾಗಿರಬೇಕು.

## ಹಸನ್ಮುಖಿ

ಮರಿಗಳು ಯಾವಾಗಲೂ ಹಸನ್ಮುಖಿಗಳಾಗಿರಬೇಕು. ಯಾರಾದರೂ ಯಾವುದಾದರೊಂದು ಕೆಲಸವನ್ನು ಮಾಡಹೇಳಿದರೆ ನಗುಮುಖದಿಂದ ಹೋಗಬೇಕು. ಮುಖವನ್ನು ಸಿಂಡರಿಸಿಕೊಂಡು ಗೊಣಗುಟ್ಟುತ್ತಾ ಹೋಗಬಾರದು. ಮರಿಗಳು ಯಾವಾಗಲೂ ಅಳಲೇ ಕೂಡದು. ಕೋಪವನ್ನು ತಡೆದುಕೊಳ್ಳುವುದು, ಸೋವನ್ನು ಸಹಿಸಿಕೊಳ್ಳುವುದು ಮರಿಗಳ ಲಕ್ಷಣ. ಒಬ್ಬರಿಂದ ಬಾಧೆಯಾದಾಗಲೂ, ಆದ ಕೆಲಸವು ಕೈ ಜಾರಿ ಹೋದಾಗಲೂ, ತಮ್ಮ ನಿರೀಕ್ಷಣೆಗೆ ಲೋಪ ಬಂದಾಗಲೂ ಮರಿಗಳು ನಗುಮುಖದಿಂದಲೇ ಇರಬೇಕು.



ನಗುತಿರು! ನಗುತಿರು! ನೀ ನಗುತಿದ್ದರೆ ನಾಡೇ ನಗುವುದು ನಿನ್ನೊಡನೆ!



# ಎರಡು ತಾರೆ

## ಅಕ್ಷರ ಸಂಕೇತ

## (SIGNALLING)

ಸ್ಕೌಟುಗಳು ಒಬ್ಬರನ್ನೊಬ್ಬರು ಬಿಟ್ಟು ಕಾಡು ಮೇಡುಗಳಲ್ಲಿಯೋ, ಬೆಟ್ಟ ಗುಡ್ಡಗಳಲ್ಲಿಯೋ ಕಳೆದುಹೋಗಿದ್ದರೆ ತಮ್ಮ ದಳದವರಿಗೆ ಯಾವುದಾದರೂ ವರ್ತಮಾನವನ್ನು ಕಳುಹಿಸಬೇಕಾಗುತ್ತದೆ. ಇದೂ ಅಲ್ಲದೆ ಇತರರಿಗೆ ತಿಳಿಯದಂತೆ ತಮ್ಮವರಿಗೆ ಗುಟ್ಟಿನ ಸಮಾಚಾರಗಳನ್ನು ತಿಳಿಸಬೇಕಾಗುತ್ತದೆ. ಇಂತಹ ಸಂದರ್ಭಗಳಿಗೆಲ್ಲಾ ವರ್ತಮಾನವನ್ನು ಕಳುಹಿಸುವ ಉಪಾಯಗಳು ತಿಳಿದಿದ್ದರೆ ಅನುಕೂಲ. ಹೀಗೆ ವರ್ತಮಾನವನ್ನು ಕಳುಹಿಸುವ ಮಾರ್ಗಗಳು ಅನೇಕವಿರುವುವು. ಮರಿಗಳ ಉಪಯೋಗಕ್ಕೆ ಬರುವ ಕೈ ಮರದ ಕ್ರಮವನ್ನು ಮಾತ್ರ ಇಲ್ಲಿ ವಿವರಿಸುವೆವು.

### ಕೈ ಮರದ ಕ್ರಮ (Semaphore System)

ಮರಿಗಳು ಈ ಕ್ರಮದಿಂದ ವರ್ತಮಾನವನ್ನು ಕಳುಹಿಸುವುದು ಕಲಿತಿರಬೇಕು. ಈ ಕ್ರಮದಲ್ಲಿ ಬರಿಯ ಕೈಗಳನ್ನೇ ಉಪಯೋಗಿಸಬಹುದು; ಅನುಕೂಲವಿದ್ದರೆ ಬಾವುಟಗಳನ್ನಿಟ್ಟುಕೊಳ್ಳುವುದು ಒಳ್ಳೆಯದು.

ಕೈ ಮರದ ಕ್ರಮವನ್ನನುಸರಿಸಿ ಕನ್ನಡ ಭಾಷೆಯಲ್ಲಿಯೂ ವರ್ತಮಾನವನ್ನು ಕಳುಹಿಸಲು ಕೆಲವರು ಪ್ರಯತ್ನಪಟ್ಟಿರುತ್ತಾರೆ. ಕನ್ನಡ ಭಾಷೆಯಲ್ಲಿ ಅಕ್ಷರಗಳು ಹೆಚ್ಚಾಗಿರುವುದರಿಂದಲೂ, ಕೈ ಮರದ ಕ್ರಮದಲ್ಲಿ ಇಪ್ಪತ್ತೆಂಟು ಸ್ಥಾನಗಳು ಮಾತ್ರವಿರುವುದರಿಂದಲೂ, ವರ್ತಮಾನವನ್ನು ಕಳುಹಿಸಲು ತೊಂದರೆಯಾಗುತ್ತದೆ. ಹೆಚ್ಚು ಕಾಲವೂ, ಹೆಚ್ಚು ಶ್ರಮವೂ ವೆಚ್ಚವಾಗದಂತೆ, ಸರಿಯಾಗಿ ವರ್ತಮಾನವನ್ನು ಕಳುಹಿಸುವುದಕ್ಕೆ ಉಪಾಯವು ಬೇಕಾಗಿರುವುದರಿಂದ, ಸಮರ್ಪಕವಾದ ಕ್ರಮವೊಂದನ್ನು ನಮ್ಮ ಭಾಷೆಗೆ ಕೊಡುವುದು ಸುಲಭವಲ್ಲ.

‘ಸ್ಕೌಟುಗಳ ಕನ್ನಡ ಕೈಪಿಡಿ’ ಯಲ್ಲಿ ಒಂದು ಕ್ರಮವನ್ನು ಕೊಟ್ಟಿರುತ್ತಾರೆ; ಅದು ಮಾತನಾಡುವ ಭಾಷೆಗೆ ಮಾತ್ರ ಅನ್ವಯಿಸುವುದು. ಆ ಕ್ರಮವನ್ನು ಅನುಸರಿಸಿ ಅಭ್ಯಾಸ ಮಾಡಬಹುದು.

“ಸ್ವರಗಳಲ್ಲಿ ಅ, ಇ, ಉ, ಎ, ಒ ಎಂಬಿವುಗಳನ್ನು ಮಾತ್ರ ಇಟ್ಟುಕೊಳ್ಳುವುದು. ದೀರ್ಘಸ್ವರಗಳು ಬೇಕಾದಾಗ ಹ್ರಸ್ವ ಸ್ವರದ ಸಂಕೇತವನ್ನು ಎರಡು ಬಾರಿ ಕಳುಹಿಸಬೇಕು.




‘ಐ’ ಎಂಬ ಸ್ವರಕ್ಕೆ ಬದಲಾಗಿ ‘ಅಯ್’ ಎಂದೂ, ‘ಔ’ ಎಂಬ ಸ್ವರಕ್ಕೆ ಬದಲಾಗಿ ‘ಅವ್’ ಎಂದೂ ಸಂಕೇತ ಕಳುಹಿಸಬೇಕು.

ವರ್ಗೀಯ ವ್ಯಂಜನಗಳಲ್ಲಿ ಕ್, ಗ್, ಚ್, ಜ್, ಟ್, ಡ್, ಣ್, ತ್, ದ್, ನ್, ಪ್, ಬ್, ಮ್ ಎಂಬಿವುಗಳನ್ನೂ, ಅವರ್ಗೀಯಗಳಲ್ಲಿ ಯ್, ರ್, ಲ್, ವ್, ಸ್, ಹ್, ಳ್ ಎಂಬಿವುಗಳನ್ನೂ ಇಟ್ಟುಕೊಳ್ಳಬೇಕು. ಮಹಾ ಪ್ರಾಣಾಕ್ಷರಗಳ ಉಪಯೋಗವು ಬೇಕಾಗಿಲ್ಲ. ಅವುಗಳಿಗೆ ಬದಲು ಅಲ್ಪ ಪ್ರಾಣಗಳನ್ನೇ ಇಟ್ಟುಕೊಳ್ಳುವುದು.

ವರ್ತಮಾನ 'ಸರಿ' ಎನ್ನುವುದಕ್ಕೆ 'ಅ' ಎಂಬುದರ ಸಂಕೇತವನ್ನು ಉಪಯೋಗಿಸಬೇಕು. ಸಂಖ್ಯೆಗಳಿಗೆ 'ಅ' ಇಂದ 'ಜ್' ವರೆಗಿನ ಸಂಕೇತಗಳನ್ನು ಉಪಯೋಗಿಸಬೇಕು. ಸೊನ್ನೆಗೆ 'ನ್' ಎಂಬುದರ ಸಂಕೇತ ವನ್ನು ಉಪಯೋಗಿಸುವುದು."

ಯಾವಕಡೆಗೆ ವರ್ತಮಾನವನ್ನು ಕಳುಹಿಸಬೇಕೋ ಆ ಕಡೆಗೆ ಮರಿಯು ತಿರುಗಿಕೊಂಡು ವರ್ತಮಾನ ವನ್ನು ಕಳುಹಿಸಬೇಕು. ವರ್ತಮಾನವನ್ನು ಪಡೆಯುವವನು ಒಂದು ಪದವನ್ನು



ಓದುವವನು ;
ಕಳುಹಿಸುವವನು.



ಪಡೆಯುವವನು ;
ಬರೆದುಕೊಳ್ಳುವವನು.

ಸರಿಯಾಗಿ ಪಡೆದ ಕೂಡಲೇ, 'ಸರಿ' ಎಂಬುದಕ್ಕೆ ಸಂಕೇತವನ್ನು ಕಳುಹಿಸಬೇಕು.

# ದಿಕ್ಕುಗಳು

ಕಳೆದುಹೋದ ದಾರಿಯನ್ನು ಪತ್ತೆ ಮಾಡುವುದಕ್ಕೂ, ಹೊಸ ದಾರಿಯನ್ನು ತಿಳಿಯುವುದಕ್ಕೂ ದಿಕ್ಕುಗಳ ಪರಿಚಯವು ಅತ್ಯಾವಶ್ಯಕ. ಅದರಲ್ಲಿ ಮುಖ್ಯವಾಗಿ ಉತ್ತರ ದಿಕ್ಕನ್ನು ತಿಳಿದರೆ ಮಿಕ್ಕ ದಿಕ್ಕುಗಳನ್ನು ಸುಲಭವಾಗಿ ಹೇಳಬಹುದು. ಮರಿಗಳು ಉತ್ತರಮುಖಿಯ ಸಹಾಯದಿಂದ ಎಂಟು ದಿಕ್ಕುಗಳನ್ನು ಹೇಳುವುದು ತಿಳಿದುಕೊಂಡಿರಬೇಕು.




ಉತ್ತರಮುಖಿ

ಉತ್ತರಮುಖಿಯು ಗಡಿಯಾರದಂತೆಯೇ ಇರುತ್ತದೆ. ಆದರೆ ಇದಕ್ಕೆ ಒಂದೇ ಕೈ. ಈ ಕೈ ಯಾವಾಗಲೂ ಉತ್ತರ ದಿಕ್ಕನ್ನೇ ಸೂಚಿಸುತ್ತದೆ. ಅದರ ಹಿಂದುಗಡೆಯ ದಿಕ್ಕು ದಕ್ಷಿಣ ; ಬಲಗಡೆ ಪೂರ್ವ ; ಎಡಗಡೆ ಪಶ್ಚಿಮ.

---

**ಸೂಚನೆ :** ಉತ್ತರ, ದಕ್ಷಿಣ, ಪೂರ್ವ ಮತ್ತು ಪಶ್ಚಿಮ ದಿಕ್ಕುಗಳಿಗೆ ಕ್ರಮವಾಗಿ ಬಡಗಲು, ತೆಂಕಲು, ಮೂಡಲು ಮತ್ತು ಪಡವಲು ಎಂದು ಹೆಸರು.

ಈ ನಾಲ್ಕು ದಿಕ್ಕುಗಳಲ್ಲಿಯೂ ಎರಡೆರಡರ ಮಧ್ಯೆ ಇನ್ನು ನಾಲ್ಕು ದಿಕ್ಕುಗಳಿವೆ. ಅವುಗಳೇ ಈಶಾನ್ಯ, ಆಗ್ನೇಯ, ನೈರುತ್ಯ, ವಾಯವ್ಯ.

ಉತ್ತರಮುಖಿ ಇಲ್ಲದಿರುವಾಗ ಹಗಲಿನಲ್ಲಿ ಸೂರ್ಯನು ಚೆನ್ನಾಗಿ ಪ್ರಕಾಶಿಸುತ್ತಿದ್ದರೆ ಪೂರ್ವ, ಪಶ್ಚಿಮ ದಿಕ್ಕುಗಳನ್ನು ತಿಳಿಯಬಹುದು. ದಕ್ಷಿಣಾಯಣದಲ್ಲಿ ಸ್ವಲ್ಪ ದಕ್ಷಿಣದ ಕಡೆಗೂ, ಉತ್ತರಾಯಣದಲ್ಲಿ ಸ್ವಲ್ಪ ಉತ್ತರದ ಕಡೆಗೂ ವಾಲಿಕೊಂಡು ಸೂರ್ಯನು ಪೂರ್ವದಲ್ಲಿ ಉದಯಿಸುವನು. ಪಶ್ಚಿಮದಲ್ಲಿ ಮುಳುಗುವನು. ಪೂರ್ವಾಭಿಮುಖವಾಗಿ ನಿಂತರೆ ನಮ್ಮ ಬಲಗಡೆಯೇ ದಕ್ಷಿಣ; ಎಡಗಡೆಯೇ ಉತ್ತರ.

## ಕಾಯೌ ಶ್ರೀಗೌರಿ

ದೇವರಿಗೆ ಭಕ್ತಿಯನ್ನು ತೋರ್ಪಡಿಸುವಂತೆಯೇ ಶ್ರೀಮನ್ಮಹಾರಾಜರವರಿಗೂ ನಮ್ಮ ಭಕ್ತಿಯನ್ನು ತೋರ್ಪಡಿಸಬೇಕೆಂದು ಹಿಂದಿಯೇ ಹೇಳಿದೆ. ಅದಕ್ಕಾಗಿಯೇ ಮೈಸೂರಿನ ಶ್ರೇಯಃಪ್ರಾರ್ಥನೆಯಾದ ಕಾಯೌ ಶ್ರೀಗೌರಿಯನ್ನು ಹೇಳುವುದು. ಇದನ್ನು ಹೇಳುವಾಗ ತಯಾರಿನಲ್ಲಿ ನಿಂತುಕೊಳ್ಳುವುದಲ್ಲದೆ ಮರ್ಯಾದೆಯಿಂದ ನಡೆದುಕೊಳ್ಳಬೇಕು.

## ವಂದೇ ಮಾತರಂ

ರಾಷ್ಟ್ರಗಾನವೂ, ರಾಷ್ಟ್ರಧ್ವಜವೂ ನಮ್ಮ ಮಾತೃ ಭೂಮಿಯಷ್ಟೇ ಪವಿತ್ರವಾದುವು. ಆದುದರಿಂದ 'ವಂದೇ ಮಾತರಂ' ಎಂಬ ಹಾಡು ನಮ್ಮ ಮಾತೃ ಭೂಮಿಯಾದ ಹಿಂದೂದೇಶಕ್ಕೆ ಸಂಬಂಧಪಟ್ಟಿದೆಯಾದಕಾರಣ ಇದನ್ನು ಭಾರತ ಮಾತೆಯ ಮಕ್ಕಳೆಲ್ಲರೂ ಹಾಡಲೇ ಬೇಕು.

## ಹಣವನ್ನುಳಿಸುವುದು

ಬುದ್ಧಿ ಇಲ್ಲದ ಹುಡುಗರು ಕೈಗೆ ಸ್ವಲ್ಪ ದುಡ್ಡು ಸಿಕ್ಕಿತೆಂದರೆ ಅದನ್ನು ಸಿನೀಮಾಗಳಿಗೊ, ನಾಟಕಗಳಿಗೊ ಹಾಕಿಬಿಡುತ್ತಾರೆ. ಆದರೆ ಬುದ್ಧಿವಂತರು ಅದನ್ನು ಭದ್ರವಾಗಿ ಕೂಡಿಡುವರು.

ಎಷ್ಟಾದರೂ ದುಡ್ಡು ನಮ್ಮ ಕೈಲಿದ್ದರೆ ಖರ್ಚು ಮಾಡಬೇಕೆಂಬ ಚಪಲವಾಗುವುದು. ಆದುದರಿಂದ ಅದನ್ನು 'ಸೇವಿಂಗ್ಸ್ ಬ್ಯಾಂಕ್'ಗಳಲ್ಲಿ ಇಡುವುದು ಒಳ್ಳೆಯ ಮಾರ್ಗ. ಏಕೆಂದರೆ ಕೆಲವು ಕಾಲದಮೇಲೆ ಅದಕ್ಕೆ ಬಡ್ಡಿ ಬರುತ್ತದೆ. ಆಗ ಆ ಬಡ್ಡಿಯನ್ನು ಉಪಯೋಗಿಸಿಕೊಂಡು ಅಸಲನ್ನು ಹಾಗೆಯೇ ಇಟ್ಟಿರಬಹುದು; ಅಥವಾ ಬಡ್ಡಿಯನ್ನೂ ಅಸಲಿಗೇ ಸೇರಿಸಿ ಅದನ್ನು ಬೆಳೆಸುತ್ತಾ ಹೋಗಬಹುದು.

ಈಗ ಕಾಸುಕಾಸಾಗಿ ಕೂಡಿಟ್ಟರೆ ಮುಂದೆ ಅವೇ ರೂಪಾಯಿಗಳಾಗುವುವು. ಚಿಕ್ಕಂದಿನಿಂದ ಹೀಗೆ ಹಣವನ್ನು ಕೂಡಿಡುವ ಪದ್ಧತಿಯನ್ನು ಅಭ್ಯಾಸಮಾಡಿದರೆ, ಮುಂದೆ ಬಹಳ ಐಶ್ವರ್ಯವಂತರಾಗಬಹುದು.

## ಕೈ ಕೆಲಸ

### ಹೆಣೆಯುವುದು ಮತ್ತು ನೇಯುವುದು

ಮರಿಗಳು ಹೆಣೆಯುವುದನ್ನು ಕಲಿತಿರಬೇಕು. ಇದರ ಅನುಕೂಲವು ಅವರಿಗೆ ಮುಂದೆ ಗೊತ್ತಾಗುವುದು.

ಹುಲ್ಲು, ಬಿದರು ಅಥವಾ ಬೆತ್ತದಲ್ಲಿ ಚಾಪೆ, ಬುಟ್ಟಿ, ಪೆಟ್ಟಿಗೆ ಮುಂತಾದುವುಗಳನ್ನು ಮಾಡುವುದು ಕಲಿತುಕೊಂಡರೆ ಅವುಗಳನ್ನು ಮಾರಿ ಗುಂಪಿಗೆ ಹಣವನ್ನು ಸಂಪಾದಿಸಬಹುದು.

ಬಲೆಯ ಚೀಲಗಳನ್ನು ಹಾಕಬಹುದು; ಇಬ್ಬರು ಮೂವರು ಸೇರಿಕೊಂಡು 'ವಾಲಿಬಾಲ್' ಎಂಬ ಆಟಕ್ಕೆ ಉಪಯೋಗಿಸುವ ಒಂದು ಬಲೆಯನ್ನು ನೇಯಬಹುದು; ಗುಂಪಿನವರನೇಕರು ಸೇರಿ, 'ಕ್ರಿಕೆಟ್' ಎಂಬ ಆಟದಲ್ಲಿ ಚೆಂಡು ಹೊರಕ್ಕೆ ಹೋಗದಿರಲು ಉಪಯೋಗಿಸುವ ಬಲೆಯನ್ನು ತಯಾರಿಸಬಹುದು. ಇವೆಲ್ಲಾ ನೋಡುವುದಕ್ಕೆ ಕಷ್ಟವಾಗಿ ಕಂಡರೂ ಮಾಡುವುದಕ್ಕೆ ಸುಲಭವಾದ ಕೆಲಸಗಳೇ. ಒಂದೆರಡು ದಿನಗಳ ಅಭ್ಯಾಸದಿಂದ ಕಲಿತುಕೊಳ್ಳಬಹುದು.

'ನೆಟ್ ಬನಿಯನ್'ಗಳನ್ನೂ, ಕಾಲು ಚೀಲಗಳನ್ನೂ ಹೆಣೆಯಬಹುದು...

# ಮನೆ ಕೆಲಸ

## ಬಟ್ಟೆಯನ್ನು ಒಗೆದುಕೊಳ್ಳುವುದು

ಬಟ್ಟೆಗಳನ್ನು ಉಗುರುಬೆಚ್ಚಗಿರುವ ಅಥವಾ ತಣ್ಣೀರಿನಲ್ಲಿ ಮೊದಲು ನೆನೆಸಿ, ಸಾಬೂನನ್ನು ಹಾಕಿ, ಸ್ವಲ್ಪಕಾಲ ಸುತ್ತಿ ಇಡಬೇಕು. ಆಮೇಲೆ ಅದನ್ನು ಶುಭ್ರವಾದ ನೀರಿನಲ್ಲಿ ಚೆನ್ನಾಗಿ ಒಗೆದು, ಒಳ್ಳೆಯ ನೀರಿನಲ್ಲಿ ಚೆನ್ನಾಗಿ ಜಾಲಾಡಿಸಿ ಒಣಗಲಿಕ್ಕೆ ಹಾಕಬೇಕು.

## ಬಟ್ಟೆಗಳನ್ನು ಮಡಿಸಿಟ್ಟುಕೊಳ್ಳುವುದು

ಮರಿಗಳು ತಮ್ಮ ಬಟ್ಟೆಗಳನ್ನು ಅಂದವಾಗಿ ಮಡಿಸಿ, ಅವುಗಳನ್ನು ಹಾಕಿಕೊಳ್ಳುವ ರೀತಿಯಲ್ಲಿ, ಎಂದರೆ ಒಂದರ ಮೇಲೆ ಒಂದರಂತೆ ಮೊದಲು ಯಾವುದನ್ನು ಹಾಕಿಕೊಳ್ಳಬೇಕೋ ಅದು ಮೇಲುಗಡೆಯಲ್ಲಿ ಇರುವ ಹಾಗೆ ಅಚ್ಚುಕಟ್ಟಾಗಿಯೂ, ಪುಟ್ಟದಾಗಿಯೂ ಮಡಿಸಿಟ್ಟುಕೊಳ್ಳುವುದನ್ನು ಕಲಿತುಕೊಳ್ಳಬೇಕು. ಏಕೆಂದರೆ ಹೀಗೆ ಮಡಿಸಿಟ್ಟ ಬಟ್ಟೆಗಳನ್ನು ಹಾಕಿಕೊಂಡರೆ ಅವು ಅಂದವಾಗಿ ಕಾಣುತ್ತವೆ; ಅಲ್ಲದೆ ಮನೆಯಿಂದ ದೂರ ಹೋಗಿದ್ದಾಗ, ಯಾರಿಗಾದರೂ ಬೇಕಾದ ಬಟ್ಟೆಯನ್ನು ತರಲು ಸರಿಯಾದ ಗುರುತನ್ನು ಹೇಳಬಹುದು. ಕತ್ತಲೆಯಲ್ಲಿಯೂ ತಕ್ಕ ಉಡುಪನ್ನು ಪತ್ತೆ ಮಾಡಲು ಮರಿಗಳು ಶಕ್ತರಾಗಿರಬೇಕು. ಬಟ್ಟೆಗಳನ್ನು ಹುಡುಕುವಾಗ ಗೂರಾಡಬಾರದು.

## ಬೂಟ್ಸನ್ನು ಶುಭ್ರಮಾಡುವುದು

ಮರಿಗಳು ತಮ್ಮ ಬೂಟ್ಸುಗಳಿಗೆ (ತಾವೇ ಹಾಕಿಕೊಳ್ಳುವುದಾದರೆ) ಹೊಳಪಾಗಿ ಬಣ್ಣ ಹಾಕುವುದನ್ನು ಕಲಿತಿರಬೇಕು.

ಇದಕ್ಕೆ ಬೇಕಾದ ಸಾಮಾನುಗಳು :

೧. ಮಣ್ಣನ್ನು ಹೆರೆದುಹಾಕಲು ಒಂದು ಹಳೇ ಮೊಂಡ ಚಾಕು.
೨. ಕೊಳೆಯನ್ನು ಒರೆಸಲು ಒಂದು ಒರಟು ಬ್ರಷ್.

೩. ಬಣ್ಣದ ಡಬ್ಬ.
೪. ಬಣ್ಣವನ್ನು ಹಾಕಲು ಒಂದು ಚಿಂದಿ ಬಟ್ಟೆ.
೫. ಆಮೇಲೆ ಒರೆಸಲು ಒಂದು ಮೆದುವಾದ ಬ್ರಷ್.

ಎಲ್ಲಿಯಾದರೂ ಒರಟು ಜಾಗಗಳಲ್ಲಿ ಹೋಗಬೇಕಾದಾಗ ಬಣ್ಣವನ್ನು ಹಾಕಬಾರದು ; 'ಗ್ರೀಸ್' ಅನ್ನು ಹಾಕಬೇಕು.

## ಬೆಂಕಿಯನ್ನು ಹೊತ್ತಿಡುವುದು

ಮರಿಗಳಿಗೆ ಬಯಲಿನಲ್ಲಿ ಬೆಂಕಿಯನ್ನು ಹೊತ್ತಿಡುವುದು ಚೆನ್ನಾಗಿ ಬರಬೇಕು. ಒಂದು ಶೀಶೆ ಎಣ್ಣೆಯನ್ನೂ, ಒಂದು ಬೆಂಕಿ ಪೆಟ್ಟಿಗೆಯನ್ನೂ ಖರ್ಚುಮಾಡಿ ಹೊತ್ತಿಟ್ಟರೇನಾಯಿತು? ಎಣ್ಣೆಯಿಲ್ಲದೆ ಎರಡೇ ಕಡ್ಡಿಗಳಿಂದ ಹಚ್ಚುವುದನ್ನು ಕಲಿಯಬೇಕು. ನೆಲವು ಒದ್ದೆಯಾಗಿದ್ದರೆ ಕೆಲವು ಕಡ್ಡಿಗಳನ್ನು ನೆಲದಮೇಲೆ ಅಗಲವಾಗಿ ಹಾಸಿ, ಅದರ ಮೇಲೆ ತರಗೆಲೆಗಳು, ಮರದ ತೊಗಟೆಯ ಒಳಚರ್ಮ, ಕಾಗದ ಮೊದಲಾದ ಬೇಗನೆ ಹತ್ತಿಕೊಳ್ಳುವ ಯಾವುದನ್ನಾದರೂ ಇಡಬಹುದು. ಬೆಂಕಿಯು ಜಾಗ್ರತೆಯಾಗಿ ಹತ್ತಿಕೊಳ್ಳುವಂತಹ ಕಾಗದದ ಚೂರುಗಳನ್ನಾಗಲಿ, ತರಗೆಲೆಗಳನ್ನಾಗಲಿ, ಚಕ್ಕೆಗಳನ್ನಾಗಲಿ ಮಧ್ಯದಲ್ಲಿಟ್ಟು ಸುತ್ತಲೂ ಒಣಗಿದ ಕಡ್ಡಿಗಳನ್ನು ಗೋಪುರದಂತೆ ಜೋಡಿಸಿ ಹೊತ್ತಿಡಬೇಕು. ಇವುಗಳ ಮೇಲೆ ಕೆಲವು ದೊಡ್ಡ ಕಟ್ಟಿಗೆಗಳನ್ನು ಒರಗಿಸಿಡಬೇಕು.

ಚಿಕ್ಕ ಚಿಕ್ಕ ಪುರುಳೆಗಳು ಇಲ್ಲದಿದ್ದಲ್ಲಿ, ಒಂದು ಚಕ್ಕೆಯ ಕೊನೆಯ ಭಾಗವನ್ನು ಚಾಕುವಿನಿಂದ ಒರೆದು, ಶಿಗರುಗಳನ್ನು ಚಕ್ಕೆಯ ಒಂದು ಭಾಗದಲ್ಲಿ ನಿಲ್ಲುವಂತೆ ಮಾಡಬೇಕು. ಆಮೇಲೆ ಬೆಂಕಿಕಡ್ಡಿಯನ್ನು ಗೀಚಿ, ಈ ಶಿಗರುಗಳನ್ನು ಹತ್ತಿಸಿ ನೆಲದ ಎದುರು ಹಿಡಿಯಬೇಕು. ನೆಲದ ಕಡೆ ಇದ್ದರೆ ಇತರ ಚಕ್ಕೆಗಳು ಹತ್ತಿಕೊಳ್ಳುವುದಿಲ್ಲ. ಉರಿಯು ಯಾವಾಗಲೂ ಕೆಳಗಿ

ನಿಂದ ಮೇಲಕ್ಕೆ ಹೋಗುವುದು. ಆದುದರಿಂದ ಹತ್ತಿಸುವಾಗ ಕಡ್ಡಿಯನ್ನು ಕೆಳಭಾಗಕ್ಕೆ ಹಿಡಿಯಬೇಕು. ಒಲೆಯನ್ನು ಹತ್ತಿಸುವಾಗ ಹೆಚ್ಚು ಕಾಗದವನ್ನೂ, ಸ್ವಲ್ಪ ಶಿಗರನ್ನೂ, ಅತಿಯಾಗಿ ಇದ್ದಿಲನ್ನೂ ಉಪಯೋಗಿಸಿದಲ್ಲಿ ಒಲೆಯು ಹತ್ತುವುದಿಲ್ಲ. ಗಾಳಿಯಾಡಲು ಅವಕಾಶವಿರಬೇಕು. ಆಮೇಲೆ ಕೆಳಗಡೆ ಯಿಂದ ಬೆಂಕಿಯನ್ನು ಹತ್ತಿಸಬೇಕು. ಸಣ್ಣ ಕಡ್ಡಿಗಳು ಹತ್ತಿಕೊಂಡ ಮೇಲೆ ಇನ್ನು ಕೆಲವು ಕಡ್ಡಿಗಳನ್ನು ಹಾಕಿ, ದೊಡ್ಡವು ಚೆನ್ನಾಗಿ ಹತ್ತಿಕೊಳ್ಳುವವರೆಗೂ ನೋಡಿಕೊಳ್ಳಬೇಕು.



ಹಸರು ಅಥವಾ ಹೊಸದಾಗಿ ಕಡಿದ ಅಥವಾ ಬಹುಕಾಲದಿಂದ ನೆಲದಮೇಲೆ ಸತ್ತುಬಿದ್ದಿರುವ ಸೌದೆಯು ಏನೂ ಪ್ರಯೋಜನವಿಲ್ಲ. ಒಣಗಿದ ಕೊಂಬೆಗಳನ್ನು ಕಡಿದು ಉಪಯೋಗಿಸಬಹುದು.

ಒಲೆಯನ್ನಾಗಲಿ, ಶಿಬಿರಾಗ್ನಿಯನ್ನಾಗಲಿ ಹತ್ತಿಸಿದರೇ ಸಾಲದು ; ಆರಿಸಿದನಂತರ ಹತ್ತಿಸಿದ ಗುರ್ತು ಸ್ವಲ್ಪವೂ ಇರದಂತೆ ಬೂದಿಯನ್ನೂ ಉಳಿದ ತುಂಡುಗಳನ್ನೂ ಚೊಕ್ಕಟವಾಗಿ ತೆಗೆದುಹಾಕಿ ಆ ಸ್ಥಳದಮೇಲೆ ಹೊಸ ಮಣ್ಣನ್ನು ಹಾಕಬೇಕು.

## ವರ್ತಮಾನವನ್ನು ತಿಳಿಸುವುದು

ಮರಿಗಳು ಒಂದೆಡೆಯಿಂದ ಮತ್ತೊಂದೆಡೆಗೆ ಸಮಾಚಾರಗಳನ್ನು ತಿಳಿಸುವ ಪದ್ಧತಿಯನ್ನು ಅಭ್ಯಾಸ ಮಾಡಬೇಕು.

ಇದರಲ್ಲಿ ಎರಡು ಮುಖ್ಯವಾದ ಸಂಗತಿಗಳು : (೧) ಹೇಳಿ ಕಳುಹಿಸಿದ ವರ್ತಮಾನವನ್ನು ಸ್ಪಷ್ಟವಾಗಿಯೂ, (೨) ಆದಷ್ಟು ಬೇಗನೂ ತಿಳಿಸುವುದು. ಅನೇಕ ಹುಡುಗರು ಆದಷ್ಟು ಬೇಗನೆ ವರ್ತಮಾನವನ್ನು ತೆಗೆದುಕೊಂಡು ಹೋಗಿ ತಿಳಿಸಬೇಕೆಂದು ಕುತೂಹಲರಾಗಿರುತ್ತಾರೆ. ಆದರೆ ಈ ಗಲಾಟೆಯಲ್ಲಿ ವರ್ತಮಾನದ ವಿಷಯವನ್ನೇ ಮರೆತುಬಿಡುವರು ಅಥವಾ ತಪ್ಪು ತಿಳಿಸಲಿಕ್ಕೂ

ಸಾಕು. ಹೀಗೆ ಮಾಡಿದರೆ ಆತುರಪಟ್ಟಿದ್ದರಿಂದ ಪ್ರಯೋಜನ ತಾನೇ ಏನು ? ಅಥವಾ ವರ್ತಮಾನವನ್ನು ಸರಿಯಾಗಿ ತಿಳಿಸಬೇಕೆಂದು ಅದನ್ನೇ ಮನನ ಮಾಡುತ್ತಾ ನಿಧಾನವಾಗಿ ಹೋದರೂ ಉಪಯೋಗವಿಲ್ಲ. ವರ್ತಮಾನ ವನ್ನು ಸ್ಪಷ್ಟವಾಗಿಯೂ, ಜಾಗ್ರತೆಯಾಗಿಯೂ ತಿಳಿಸುವುದು ಮುಖ್ಯ.

ವರ್ತಮಾನದ ವಿಷಯದಲ್ಲಿ ಬಹಳ ಜಾಗರೂಕತೆಯಿಂದಿರಬೇಕು. ಹೊರಡುವುದಕ್ಕೆ ಮುಂಚೆ ಒಂದು ಸಲ ಆ ವರ್ತಮಾನವನ್ನು ತನ್ನಷ್ಟಕ್ಕೆ ತಾನೇ ಹೇಳಿಕೊಂಡು, ಕಳುಹಿಸುವವರೊಂದಿಗೆ ಒಂದು ಸಾರಿ ಹೇಳಿ ಚೆನ್ನಾಗಿ ಪಾಠಮಾಡಿಕೊಳ್ಳುವುದಲ್ಲದೆ, ಹೋಗುವಾಗ ದಾರಿಯ ಉದ್ದಕ್ಕೂ ಅದನ್ನು ಜ್ಞಾಪಿಸಿಕೊಳ್ಳುತ್ತಿರಬೇಕು.

ವಿಷಯವನ್ನು ತಿಳಿಸಬೇಕಾಗಿರುವ ಸ್ಥಳವು ಗೊತ್ತಿಲ್ಲದಿದ್ದಲ್ಲಿ, ಅದರ ಗುರುತನ್ನು ಚೆನ್ನಾಗಿ ತಿಳಿದುಕೊಂಡು ಹೋಗಿ, ಹುಡುಕಿ ತಿಳಿಸಬೇಕು. ಹೇಳಿದೊಡನೆಯೇ ಹೊರಟು, ವಿಷಯವನ್ನು ಸರಿಯಾಗಿ ತಿಳಿಸಿ, ಕೂಡಲೇ ಬಂದು ಉತ್ತರವನ್ನು ಹೇಳಬೇಕು. ಬೇಜಾರುಪಟ್ಟುಕೊಂಡು, ಸುಳ್ಳನ್ನಾದರೂ ಹೇಳಿ ತಪ್ಪಿಸಿಕೊಳ್ಳಕೂಡದು. ದಾರಿಯಲ್ಲಿ ಇನ್ನೊಬ್ಬನಿಗೆ ಆ ಕೆಲಸ ವನ್ನು ಹಚ್ಚಿ ಹಿಂತಿರುಗಬಾರದು.

## ವ್ಯಾಯಾಮ

ಶರೀರವನ್ನು ಒಳ್ಳೆಯ ಆರೋಗ್ಯಸ್ಥಿತಿಯಲ್ಲಿಟ್ಟುಕೊಳ್ಳುವುದು ಮರಿ ಗಳ ಪ್ರಥಮ ಕರ್ತವ್ಯ. ಆರೋಗ್ಯಭಾಗ್ಯವನ್ನು ಚೆನ್ನಾಗಿ ಗಳಿಸಿದ್ದರೆ ಶರೀ ರವು ಒಳ್ಳೆಯ ಸ್ಥಿತಿಯಲ್ಲಿರುವುದೆಂದು ಹೇಳಬೇಕಾಗಿಲ್ಲ. ರಕ್ತವು ಪರಿಶುದ್ಧ ವಾಗಿರುವುದಕ್ಕೂ, ಅದು ಕ್ರಮವಾಗಿ ಪರಿಚಲನವಾಗುವುದಕ್ಕೂ ಕಾಲ ಕಾಲಕ್ಕೆ ವ್ಯಾಯಾಮವನ್ನು ತೆಗೆದುಕೊಳ್ಳುತ್ತಿದ್ದರೆ ದೇಹಸ್ಥಿತಿಯು ಚೆನ್ನಾ ಗಿಯೇ ಇರುತ್ತದೆ. ರಕ್ತಪುಷ್ಟಿಯಾಗುವಂತೆ ಒಳ್ಳೆಯ ಮಿಶ್ರಾಹಾರವೂ, ಆಹಾರವು ಸುಲಭವಾಗಿ ಜೀರ್ಣಿಸಿ ರಕ್ತಗತವಾಗುವಂತೆ ವ್ಯಾಯಾಮವೂ, ಅಂಗಾಂಗಗಳು ತಮ್ಮ ತಮ್ಮ ಕೆಲಸಗಳನ್ನು ಸರಿಯಾಗಿ ಮಾಡುವಂತೆ ಆರೋಗ್ಯ ನಿಯಮಾನುಸರಣೆಯೂ ಅವಶ್ಯಕ.

ಎರಡು ತಾರೆ ಮಂಗಳು ಮಾಡಬೇಕಾದ ಕಾಲಿನ ಬೆರಳನ್ನು ಮುಟ್ಟುವ ಮತ್ತು ಮಂಡಿ ಮಡಿಸುವ ಸಾಧನೆಗಳು.

## ೧. ಕಾಲಿನ ಬೆರಳನ್ನು ಮುಟ್ಟುವುದು

ಈ ಅಭ್ಯಾಸದಲ್ಲಿ ಮೊದಲು ಸರಿಯಾಗಿ ನಿಂತು ಕಾಲುಗಳನ್ನು ಸ್ವಲ್ಪ ಅಗಲಿಸಿ ಕೈಗಳೆರಡನ್ನೂ ತಲೆಯ ಹಿಂಭಾಗದಲ್ಲಿ ಜೋಡಿಸಿ ಆಕಾಶವನ್ನು ನೋಡುತ್ತಾ ಆದಷ್ಟು ಹಿಂದಕ್ಕೆ ಬಗ್ಗಬೇಕು. ಹಾಗಿರುವಾಗಲೇ ಹೊರಗಿನ ಗಾಳಿಯನ್ನು ಒಳಕ್ಕೆ ಚೆನ್ನಾಗಿ ತೆಗೆದುಕೊಳ್ಳಬೇಕು (ಚಿತ್ರ ೧). ಬಳಿಕ ತೋಳುಗಳನ್ನು ತಲೆಯಿಂದ ಮೇಲಕ್ಕೆ ಸಾಧ್ಯವಾದಷ್ಟು ಎತ್ತಿ ಚಲಿಸದೆ



ಚಿತ್ರ ೧ ಚಿತ್ರ ೨

ನಿಲ್ಲಬೇಕು (ಚಿತ್ರ ೨). ಆಮೇಲೆ ಮುಂದಕ್ಕೆ ಬಗ್ಗಿ ಉಸಿರನ್ನು ಹೊರಕ್ಕೆ ಬಿಡುತ್ತಾ ಕೈ ಬೆರಳುಗಳಿಂದ ಕಾಲು ಬೆರಳುಗಳನ್ನು ಮುಟ್ಟಬೇಕು (ಚಿತ್ರ ೩). ಹೀಗೆ ಬಗ್ಗಿದಾಗ ಮೊಣಕಾಲುಗಳನ್ನು, ತೊಡೆಗಳನ್ನು ಬಗ್ಗಿಸಕೂಡದು.

ಮೊದ ಮೊದಲು ಅನೇಕರಿಗೆ ಇದು ಕಷ್ಟವಾಗಿ ತೋರಬಹುದು ಕೆಲವರಿಗೆ ಕಾಲು ಬೆರಳುಗಳು ನಿಲುಕುವುದೇ ಇಲ್ಲ. ಆದರೆ ಅಭ್ಯಾಸದಿಂದ ಸರಿಹೋಗುವುದು.



ಚಿತ್ರ ೩

ಸೂಚನೆ : ಚಿತ್ರಗಳಲ್ಲಿರುವ ಬಾಣದ ಗುರುತುಗಳು ಉಸಿರನ್ನು ಎಳೆದುಕೊಳ್ಳುವ ಮತ್ತು ಬಿಡುವ ವಿಧಾನವನ್ನು ಸೂಚಿಸುತ್ತವೆ.

## ೨. ಮೋಡಿ ಮಡಿಸುವುದು

ಮೊದಲು ಸರಿಯಾಗಿ ಎರಡು ಕೈಗಳಿಂದಲೂ ಸೊಂಟವನ್ನು ಹಿಡಿದು ಕೊಳ್ಳಬೇಕು. ಹೀಗೆ ಹಿಡಿದುಕೊಳ್ಳುವಾಗ ಹೆಬ್ಬೆರಳುಗಳು ಹಿಂಭಾಗಕ್ಕೆ ಇರಬೇಕು. ಅನಂತರ ಹಿಮ್ಮಡಿಯನ್ನು ನೆಲದಿಂದ ಮೇಲಕ್ಕೆ ಎತ್ತಿ ಕಾಲಿನ ಬೆರಳುಗಳ ಮೇಲೆ ನಿಂತುಕೊಂಡು ಮೊಣಕಾಲುಗಳನ್ನು ಹೊರಕ್ಕೆ ತಿರುಗಿಸಿ ಉಸಿರನ್ನು ಬಿಡುತ್ತಾ ನಿಧಾನವಾಗಿ ಹಿಮ್ಮಡಿಗಳ ಮೇಲೆ ಕುಳಿತುಕೊಳ್ಳಬೇಕು. ಮಂಡಿಯನ್ನು ಮುಂದಕ್ಕೆ ಮಡಿಸಿರಬೇಕು; ಬೆನ್ನು ನೆಟ್ಟಗಿರಬೇಕು. ಎದೆಯು ಮುಂದಕ್ಕೆ ಚಾಚಿರಬೇಕು (ಚಿತ್ರ ೪). ಆಮೇಲೆ ಉಸಿರನ್ನು ಎಳೆದುಕೊಳ್ಳುತ್ತಾ ನಿಧಾನವಾಗಿ ಮೇಲಕ್ಕೆ ಏಳಬೇಕು.



ಚಿತ್ರ ೪

ಈ ಎರಡು ಸಾಧನೆಗಳನ್ನು ಪ್ರತಿನಿತ್ಯವೂ ಹತ್ತಾರುಸಲ ಮಾಡಬೇಕು. ಇದರಿಂದ ಕೈ, ಹೊಟ್ಟೆ, ಸೊಂಟ, ತೊಡೆ, ಕಾಲು, ಚಿಪ್ಪು ಮುಂತಾದುವುಗಳೆಲ್ಲಾ ಬಲಪಡುತ್ತವೆ.

## ಹಲಗೆಯ ಮೇಲೆ ನಡೆಯುವುದು

ಇದು ನೋಡುವುದಕ್ಕೆ ಬಹಳ ಸುಲಭವಾಗಿ ಕಾಣುತ್ತದೆ. ಮಾಡುವುದೇ ಕಷ್ಟ. ಎರಡನೆಯ ತಾರೆಯ ಮರಿಗೆ ಒಂದು ಮೇಜದಷ್ಟು ಎತ್ತರದಲ್ಲಿ, ೧೨ ಅಡಿ ಉದ್ದ ೬ ಅಂಗುಲ ಅಗಲವಿರುವ ಒಂದು ಹಲಗೆಯಮೇಲೆ ನಡೆಯುವುದಕ್ಕೆ ಬರಬೇಕು. ನೆಲದ ಮೇಲಿಟ್ಟ ಹಲಗೆಯ ಮೇಲೆ ನಡೆಯುವುದು ಸುಲಭ. ಆದರೆ ಅದೇ ಹಲಗೆಯನ್ನು ಒಂದು ಮೇಜಿನಷ್ಟು ಎತ್ತರದಲ್ಲಿಟ್ಟಿದ್ದರೆ ಕೆಲವರಿಗೆ ತಲೆ ತಿರುಗಲು ಪ್ರಾರಂಭಿಸುತ್ತದೆ. ಮೊದಲು ಮೊದಲು ಇದು ಕಷ್ಟವಾಗಿ ಕಂಡು ಬಂದರೂ ಅಭ್ಯಾಸದಿಂದ ಸುಲಭವೇ ಆಗುವುದು.

**ಈ ಅಭ್ಯಾಸದಿಂದ ತಲೆ ತಿರುಗದಂತೆಯೂ, ಒಂದು ಕಡೆಗೆ ವಾಲದಂತೆಯೂ ನಡೆಯುವುದು ಬರುವುದು.**

# ಪ್ರಥಮ ಚಿಕಿತ್ಸೆ
## (FIRST AID)

### ಕತ್ತರಿಸಿದ ಬೆರಳನ್ನು ಕಟ್ಟುವುದು

ಹುಡುಗರು ಆಟವಾಡುವಾಗ ಅಥವಾ ಸೀಸದ ಕಡ್ಡಿಗಳನ್ನು ಹೆರೆದುಕೊಳ್ಳುವಾಗ ಚಾಕುವಿನಿಂದ ಕೈಬೆರಳುಗಳನ್ನು ಕೊಯ್ದುಕೊಳ್ಳುವ ಸಂಭವವುಂಟು. ಅಂತಹ ವೇಳೆಗಳಲ್ಲಿ ಮಾಡಬೇಕಾದ ಚಿಕಿತ್ಸೆಗಳನ್ನು ಮರಿಗಳು ತಿಳಿದುಕೊಂಡಿರಬೇಕು.

ಕತ್ತರಿಸಿದ ಬೆರಳನ್ನು ಚಿಕಿತ್ಸಿಸುವಾಗ ಆ ಗಾಯದಲ್ಲಿ ಕೊಳೆಯು ಸೇರದಂತೆ ಬಹಳ ಎಚ್ಚರಿಕೆಯಿಂದಿರಬೇಕು. ಗಾಯದಿಂದ ಸ್ವಲ್ಪ ರಕ್ತವು ಸುರಿದರೆ ಕೆಲವು ಸಂದರ್ಭಗಳಲ್ಲಿ ಒಳ್ಳೆಯದೇ ಆಗಬಹುದು. ಏಕೆಂದರೆ ಅದು ಕೆಟ್ಟ ಕ್ರಿಮಿಗಳನ್ನು ಸೆಳೆದುಕೊಂಡು ಹೊರಗೆ ಬೀಳುವುದು. ನಲ್ಲಿಯ ಕೆಳಗೋ ಅಥವಾ ಸುರಿಯುವ ನೀರಿನಲ್ಲೋ ಗಾಯವನ್ನು ತೊಳೆದರೂ ಕ್ರಿಮಿಗಳು ಕೊಚ್ಚಿ ಹೋಗುವುವು.

ಆದರೆ ಇದರಿಂದ ಕ್ರಿಮಿಗಳು ಸಾಯುವುದಿಲ್ಲ. ಅದಕ್ಕಾಗಿ ನೀರಿಗೆ ಕ್ರಿಮಿನಾಶಕ ಔಷಧಿಗಳನ್ನು ಹಾಕಿ, ನಂತರ ತೊಳೆಯುವುದು ಮೇಲು. ಅಂತಹ ಔಷಧಿಗಳಲ್ಲಿ 'ಪೊಟಾಸಿಯಂ ಪರ್‌ಮ್ಯಾಂಗನೇಟ್' ಮತ್ತು 'ಟಿಂಚರ್ ಅಯೊಡಿನ್' (Potassium Permanganate and Tincture Iodine) ಎಂಬುವು ಒಳ್ಳೆಯವು. ಮೊದಲನೆಯದರ ಸ್ವಲ್ಪ ಹರಳುಗಳನ್ನು ಮಾತ್ರ ನೀರಿಗೆ ಸೇರಿಸಿದರೆ ಸಾಕು; ಎರಡನೆಯದನ್ನು ಗಾಯಕ್ಕೆ ಹಚ್ಚಬೇಕು.

ಈಗ ಗಾಯದಲ್ಲಿ ಶತ್ರುಗಳನ್ನು ನಾಶಮಾಡಿದ್ದಾಯಿತು. ಆ ಗಾಯವು ವಾಸಿಯಾಗುವವರೆಗೂ ಅದಕ್ಕೆ ಶತ್ರುಗಳು ಪುನಃ ಬಂದು ಸೇರದಂತೆ ಶುಭ್ರವಾದ ಹತ್ತಿಯನ್ನು ಗಾಯದಮೇಲಿಟ್ಟು, ಅದರ ಮೇಲೆ ಒಟ್ಟೆಯನ್ನು

ಕಟ್ಟಬೇಕು. ಇದಕ್ಕೆ ಶುಭ್ರವಾದ ಕೈವಸ್ತ್ರವನ್ನಾಗಲಿ ಅಥವಾ ಯಾವುದಾದರೂ ಶುಭ್ರವಾದ ಎರಡು ಅಂಗುಲ ಅಗಲವಿರುವ ಬಟ್ಟೆಯನ್ನಾಗಲಿ ತೆಗೆದುಕೊಂಡು ಹತ್ತಿಯ ಮೇಲಿಟ್ಟು ಸುತ್ತಬೇಕು. ಸುತ್ತಿಲ್ಲಾ ಮುಗಿದಮೇಲೆ, ಇನ್ನೂ ಮೂರು ನಾಲ್ಕು ಅಂಗುಲಗಳುದ್ದದ ಬಟ್ಟೆ ಇದೆ ಎನ್ನುವಾಗ, ಬಟ್ಟೆಯನ್ನು ಅಗಲದಲ್ಲಿ ಎರಡು ಭಾಗವಾಗುವಂತೆ ಸೀಳಿ ಈ ಎರಡು ಸೀಳಿಸ ತುಂಡುಗಳನ್ನೂ ತೆಗೆದುಕೊಂಡು ಒಂದು ಗಂಟನ್ನು ಹಾಕಿ, ಒಂದು ಸೀಳನ್ನು ಕೆಳಗಡೆಗೂ ಇನ್ನೊಂದನ್ನು ಮೇಲ್ಗಡೆಗೂ ತೆಗೆದುಕೊಂಡು, ಎರಡನ್ನೂ ಸೇರಿಸಿ ಸಮಗಂಟನ್ನು ಹಾಕಬೇಕು.

## ಬೆಂದ ಗಾಯವನ್ನು ಮುಚ್ಚುವುದು

ದ್ರಾವಕಗಳಿಂದ ಉಂಟಾಗುವ ಗಾಯಗಳು ಬಹಳ ನೋವನ್ನು ಕೊಡುತ್ತವೆ. ಇವುಗಳಲ್ಲಿ ಗಂಧಕ ದ್ರಾವಕವೇ ಬಹಳ ಅಪಾಯಕರವಾದುದು. ಮಿಕ್ಕ ದ್ರಾವಕಗಳು ಮೈಮೇಲೆ ಬಿದ್ದರೆ ಅವು ಎಲ್ಲಿಬಿದ್ದಿರುವುವೋ ಆ ಜಾಗವನ್ನು ತಣ್ಣೀರಿನಿಂದ ಸಾಧ್ಯವಾದರೆ ಅಮೋನಿಯಾ ದ್ರವದಿಂದ ಚೆನ್ನಾಗಿ ತೊಳೆದು ಸೋಡಾ ಉಪ್ಪನ್ನು ಹಾಕಿ ಕಟ್ಟಬಹುದು. ಗಂಧಕ ದ್ರಾವಕವೇನಾದರೂ ಬಿದ್ದಿದ್ದರೆ ನೀರಿನಿಂದ ಎಂದಿಗೂ ತೊಳೆಯಬಾರದು. ಅಮೋನಿಯಾ ದ್ರವದಿಂದಲೇ ತೊಳೆದು ಸೋಡಾ ಉಪ್ಪನ್ನು ಹಾಕಿ ಕಟ್ಟಬೇಕು.

ಬೆಂದ ಜಾಗಕ್ಕೆ ಔಷಧೋಪಚಾರಗಳನ್ನು ಮಾಡಬೇಕಾದರೆ, ಅಂಟಿಕೊಂಡಿರುವ ಬಟ್ಟೆಯನ್ನು ಸುಲಿಯಬಾರದು ; ಅಲ್ಲಲ್ಲಿಗೇ ಕತ್ತರಿಸಬೇಕು. ಬೆಂದ ಭಾಗವು ಗಾಳಿಗೆ ಆಡದಂತೆ ನೋಡಿಕೊಂಡರೆ ನೋವು ಕಡಿಮೆಯಾಗುವುದು. ಇಲ್ಲದಿದ್ದರೆ ಸಹಿಸಲಸಾಧ್ಯವಾಗಿ ನೋಯುವುದು. ಬೆಂದ ಭಾಗವನ್ನು ಹೊರಗಾಳಿಯಿಂದ ಕಾಪಾಡಬೇಕಾದರೆ ಮೃದುವಾದ ಹತ್ತಿಯಪಟ್ಟಿಯನ್ನು ಒಳ್ಳೆಣ್ಣೆಯಲ್ಲೋ ಅಥವಾ ಅಗಸೆ ಎಣ್ಣೆಯಲ್ಲೋ ಅದ್ದಿ

# ಹಿರಿಯಣ್ಣಂದಿರಿಗಾಗಿ

## ಗುಂಪುಗಳನ್ನು ಪ್ರಾರಂಭಿಸುವ ವಿಧಾನ

ಮರಿಗಳ ಗುಂಪನ್ನು ಸ್ಥಾಪಿಸಲು ಅಭಿಲಾಷೆಯುಳ್ಳವರು, ಮೊದಲು ಸಾಮಾನ್ಯವಾಗಿ ಪ್ರತಿವರ್ಷವೂ ರಜಾಕಾಲಗಳಲ್ಲಿ ತಮ್ಮ ತಮ್ಮ ಡಿಸ್ಟ್ರಿಕ್ಟ್ ಸ್ಕೌಟ್ ಕೌನ್ಸಿಲ್ಲಿನವರು ಏರ್ಪಡಿಸಬಹುದಾದ ಶಿಕ್ಷಣ ಶಿಬಿರಗಳಿಗೆ ಹೋಗಿ, ಅಲ್ಲಿ ಹಿರಿಯಣ್ಣಂದಿರ ಶಿಕ್ಷಣವನ್ನು ಹೊಂದಬೇಕು. ಈ ಶಿಬಿರಗಳು ಯಾವಾಗ, ಎಲ್ಲಿ, ನಡೆಯುತ್ತವೆ ಮುಂತಾದ ವಿಷಯಗಳ ಬಗ್ಗೆ ಆಯಾ ಡಿಸ್ಟ್ರಿಕ್ಟ್ ಸ್ಕೌಟ್ ಕೌನ್ಸಿಲ್ಲುಗಳಿಗೆ ಒರೆದು ತಿಳಿಯಬಹುದು.

ಶಿಕ್ಷಣ ಶಿಬಿರಗಳಲ್ಲಿ ಸುಮಾರು ಎಂಟು ದಿವಸಗಳು ಇರಬೇಕಾಗುತ್ತದೆ. ಅನಂತರ ಶಿಕ್ಷಣವನ್ನು ಪಡೆದವರಿಗೆ ಗುಂಪುಗಳನ್ನು ಸ್ಥಾಪಿಸುವ ಅರ್ಹತೆಯುಂಟು.

ಗುಂಪುಗಳನ್ನು ಸ್ಥಾಪಿಸಬೇಕೆಂದಿರುವವರು ಕೆಲವರ ಪರಿಚಯವನ್ನು ಮಾಡಿಕೊಳ್ಳುವುದು ಅಗತ್ಯ. ಮೊದಲು ತಮ್ಮ ಸ್ಥಳಿಕ ಸ್ಕೌಟು ಸಂಘದ ಕಾರ್ಯದರ್ಶಿಗಳಿಗಾಗಲಿ ಅಥವಾ ಡಿಸ್ಟ್ರಿಕ್ಟ್ ಸ್ಕೌಟ್ ಕಮೀಷನರಿಗಾಗಲಿ ತಮ್ಮ ಅಭಿಲಾಷೆ, ಇರತಕ್ಕ ಅನುಕೂಲತೆ ಇವುಗಳನ್ನು ತಿಳಿಸಬೇಕು.

ಇದಾದಮೇಲೆ ಹುಡುಗರನ್ನು ಒಟ್ಟುಗೂಡಿಸುವುದು ಮತ್ತು ಅವರ ತಾಯಿತಂದೆ ಅಥವಾ ಪೋಷಕರನ್ನು ಕಂಡು ಅವರ ವಿಚಾರವಾಗಿ ಮಾತನಾಡುವುದು, ಇವು ಮುಖ್ಯ ಕರ್ತವ್ಯಗಳು.

ಹುಡುಗರು ಎಂದರೆ ಮರಿಗಳ ವಯಸ್ಸಿನವರು ಸಾಮಾನ್ಯವಾಗಿ ಪ್ರಾಥಮಿಕ ಪಾಠಶಾಲೆಗಳಲ್ಲೆಲ್ಲಾ ಸಿಕ್ಕುತ್ತಾರೆ. ಅದರಲ್ಲಿಯೂ ಅಲ್ಲೇ ಉಪಾಧ್ಯಾಯರುಗಳಾಗಿರುವವರು ಹುಡುಕಿಕೊಂಡು ಹೋಗಬೇಕಾಗಿಯೇ ಇಲ್ಲ. ಉಪಾಧ್ಯಾಯರುಗಳಲ್ಲದವರು ಪ್ರಾಥಮಿಕ ಪಾಠಶಾಲೆಯ ಉಪಾಧ್ಯಾಯರ ಸ್ನೇಹವನ್ನು ಬೆಳೆಸುವುದು ಉತ್ತಮ.

ಮೊದಲು ಕೆಲವು ಹುಡುಗರನ್ನು ಸೇರಿಸಿ, ಅವರಿಗೆ ಮರಿಗಳ ಶಿಕ್ಷಣದ ವಿಚಾರವನ್ನು ವಿಷದವಾಗಿ ತಿಳಿಸಬೇಕು. ಅವರಲ್ಲಿ ಯಾರು ಯಾರು ಗುಂಪಿಗೆ ಸೇರಲು ಇಷ್ಟಪಡುವರೆಂಬುದನ್ನು ವಿಚಾರಿಸಿ, ಅವರ ಹೆಸರು, ತಂದೆ ಅಥವಾ ಪೋಷಕರ ಹೆಸರು, ವಾಸಸ್ಥಳ ಮುಂತಾದ ಸಂಗತಿಗಳನ್ನು ತಿಳಿದುಕೊಳ್ಳಬೇಕು. ಸುಮ್ಮನೆ ಇಷ್ಟಬಂದಷ್ಟು ಹುಡುಗರನ್ನು ಸೇರಿಸಿಕೊಳ್ಳಬಾರದು. ಹನ್ನೆರಡಕ್ಕೆ ಹೆಚ್ಚಾಗಿರಕೂಡದು.

ಆಮೇಲೆ ನಿಮ್ಮ ವಿರಾಮಕಾಲದಲ್ಲಿ ಆ ಹುಡುಗರ ತಾಯಿತಂದೆ ಅಥವಾ ಪೋಷಕ ರನ್ನು ಅವರವರ ಮನೆಗಳಲ್ಲಿಯೇ ಹೋಗಿ ನೋಡಬೇಕು. ಈ ಸಂದರ್ಭದಲ್ಲಿ ಮರಿಗಳ ಸಂಸ್ಥೆ, ಅದರ ಕಾರ್ಯಕ್ರಮಗಳು, ಕಾಲ, ಸಮರೂಪಕ್ಕೆ ಆಗತಕ್ಕ ಖರ್ಚು ಇವೇ ಮೊದಲಾದ ವಿಚಾರಗಳನ್ನು ಅವರಿಗೆ ತಿಳಿಸಬೇಕು. ಮನೆಗಳಲ್ಲಿ ಹುಡುಗರ ವರ್ತನೆ, ಅವರ ಅನುಕೂಲತೆಗಳು, ಇವುಗಳನ್ನು ತಿಳಿದುಕೊಳ್ಳುವುದು ಮೇಲು.

ತಾಯಿತಂದೆ ಅಥವಾ ಪೋಷಕರನ್ನು ಒಪ್ಪಿಸಿದ ನಂತರ, ಹುಡುಗರನ್ನೆಲ್ಲಾ ಒಟ್ಟು ಗೂಡಿಸಿ ಸ್ವಾರಸ್ಯವಾದ ಒಂದೆರಡು ಆಟಗಳನ್ನು ಆಡಿಸಿ, ಒಂದೆರಡು ಕಥೆಗಳನ್ನು ಹೇಳ ಬೇಕು. ಮರಿಗಳ ಶಿಕ್ಷಣದಲ್ಲಿ ಆಟಗಳು, ಕಥೆಗಳು ವಿನಃ ಇನ್ನಾವುವೂ ಇಲ್ಲವೆಂದು ಅವರಿಗೆ ತಿಳಿಸಬೇಕು. ಅವರು ಮನೆಗಳಿಗೆ ಹೋಗುವಾಗ ಪ್ರತಿಯೊಬ್ಬರಿಗೂ ಒಂದೊಂದು 'ಮರಿಯ ಪ್ರವೇಶ ಪತ್ರಿಕೆ*' ಯನ್ನು ಕೊಟ್ಟು, ತಂದೆ ಅಥವಾ ಪೋಷಕರಿಂದ ರುಜು ಹಾಕಿಸಿಕೊಂಡು ಮುಂದಿನ ಕ್ಲಾಸಿನ ದಿವಸ ತರಬೇಕೆಂದು ಹೇಳಬೇಕು. ಈ ಸಂಧರ್ಭ ದಲ್ಲಿಯೇ ನೀವು ಹುಡುಗರ ತಾಯಿತಂದೆ ಅಥವಾ ಪೋಷಕರನ್ನು ಅವರವರ ಮನೆಗಳಲ್ಲಿಯೇ ಹೋಗಿ ನೋಡಿ ಮಾತನಾಡುವುದು ಒಳ್ಳೆಯದು.

ಆಟಗಳು, ಕಥೆಗಳು ಇವುಗಳ ಮೂಲಕವೇ ಮರಿಗಳ ಶಿಕ್ಷಣವನ್ನು ಕೊಡಬೇಕಲ್ಲದೆ ಉಪನ್ಯಾಸಗಳ ಮೂಲಕವಲ್ಲ. ಹುಡುಗರನ್ನು ಆಟಗಳಿಂದ ಆಕರ್ಷಿಸಿ, ಅದರ ಮೂಲಕ ಎಲ್ಲಾ ವಿದ್ಯೆಗಳನ್ನೂ ಹೇಳಿಕೊಡುವುದು ಉತ್ತಮ. ಪುರಾಣಗಳಿಂದಲೂ, ಇತಿಹಾಸಗ ಳಿಂದಲೂ, ಕಾವ್ಯಗಳಿಂದಲೂ ಹುಡುಗರಿಗೆ ಕಥೆಗಳನ್ನು ಹೇಳಿ ಉತ್ಸಾಹವನ್ನು ಹುಟ್ಟಿಸಿ ಆ ವೀರಪುರುಷರ ಮೇಲ್ಪಂಕ್ತಿಯನ್ನು ಅನುಸರಿಸುವಂತೆ ಉತ್ತೇಜನ ಕೊಡಬೇಕು.

ಶಾಲೆಗಳಲ್ಲಿ ಹೇಳಿಕೊಡುವ ರೀತಿಯಲ್ಲಿ ಹೇಳಿಕೊಡಕೂಡದು. ಹುಡುಗರಿಗೆ ಶಾಲೆಗಳಲ್ಲಿಯೇ ಬಹಳ ಬೇಜಾರಾಗಿರುತ್ತದೆ. ಮರಿಗಳ ಶಿಕ್ಷಣವನ್ನು ವಿರಾಮಕಾಲ ಗಳಲ್ಲಿ ಹೇಳಿಕೊಡಬೇಕಾಗಿರುವುದರಿಂದ ಅವರ ಬೇಜಾರು ಪರಿಹಾರವಾಗುವಂತೆಯೂ, ಅವರಿಗೆ ಇದು ನೂತನವಾಗಿ ಕಂಡುಬರುವಂತೆಯೂ ಮಾಡಬೇಕು. ಇದೂ ಒಂದು ಶಾಲಾ ವಿದ್ಯೆಯಾಗಿರಕೂಡದು.

ನೀವು ನಡೆನುಡಿಗಳಲ್ಲಿಯೂ, ಆಚಾರ ವ್ಯವಹಾರಗಳಲ್ಲಿಯೂ ಆದರ್ಶಪ್ರಾಯ ರಾಗಿರಬೇಕು; ನಿಮ್ಮನ್ನು ನೋಡಿ ಹುಡುಗರು ತಿದ್ದಿಕೊಳ್ಳುವಂತೆ.

---

* 'ಪ್ರವೇಶ ಪತ್ರಿಕೆ'ಗಳನ್ನು ಬೆಂಗಳೂರು ಸಿಟಿ ಸ್ಕೌಟ್ ಹೆಡ್‌ಕ್ವಾರ್ಟರ್ಸ್‌ನಿಂದಲೋ ಅಥವಾ ಆಯಾ ಡಿಸ್ಟ್ರಿಕ್ಟ್ ಸ್ಕೌಟು ಕೌನ್ಸಿಲ್ಲುಗಳಿಂದಲೋ ತರಿಸಿಕೊಳ್ಳಬೇಕು.

## ಸಂಘದವರಲ್ಲಿ

ಗುಂಪಿನ ಕೆಲಸಗಳು ಪ್ರಾರಂಭವಾಗಿ ಒಂದೆರಡು ಕ್ಲಾಸುಗಳು ಸಹಾ ನಡೆದಮೇಲೆ ಸಂಘದವರಿಗೆ ನಿಮ್ಮ ಹೆಸರು, ವಿಳಾಸ, ಶಿಕ್ಷಣಹೊಂದಿದ ಶಿಬಿರ, ಕಾಲ, ಹುಡುಗರ ಸಂಖ್ಯೆ, ಗುಂಪಿಗೆ ಇಡಬೇಕೆಂದಿರುವ ಹೆಸರು ಮೊದಲಾದ ವಿಷಯಗಳನ್ನು ತಿಳಿಸಬೇಕು. ನಂತರ ಸಂಘದಪರವಾಗಿ ಯಾರಾದರೂ ಬಂದು ನಿಮ್ಮ ಗುಂಪನ್ನು ನೋಡಿಕೊಂಡು ಹೋಗುತ್ತಾರೆ; ಮತ್ತು ಕೆಲಸಗಳು ಸೂಕ್ತವಾಗಿರುವುದನ್ನು ಕಂಡು, ಗುಂಪಿನ ಹೆಸರಿನಲ್ಲಿ ನಿಮಗೊಂದು ಆಜ್ಞಾಪತ್ರವು ಬರುವುದು. ಆಗ ನಿಮ್ಮ ಹುಡುಗರಿಗೆ ಸಂಘದವರಿಂದ ಏರ್ಪಡಿಸಿದ ಎಲ್ಲಾ ಪಂಥಗಳಿಗೆ ನಿಲ್ಲುವುದಕ್ಕೂ, ಪ್ರವೀಣತೆಯ ಪದಕಗಳನ್ನು ಪಡೆಯುವುದಕ್ಕೂ ಅರ್ಹತೆಯುಂಟಾಗುತ್ತದೆ.

## ಕೋಮಲಪಾದ

ಹುಡುಗರು 'ಕೋಮಲಪಾದ'ದ ದರ್ಜೆಗೆ ಬರುವವರೆಗೂ ಮರಿಗಳಲ್ಲ. ಅವರಿಗೆ ಮೊದಲೆತ್ತಿಕೊಳ್ಳುತ್ತಲೂ ಮರಿಗಳಾಗಿಬಿಡಬೇಕು ಎಂದು ಉತ್ಸಾಹವಿರುತ್ತದೆ. ಈ ಉತ್ಸಾಹವು ಬತ್ತಿಹೋಗುವಂತೆ ಉಪನ್ಯಾಸಗಳನ್ನೂ, ವಿವರಣೆಗಳನ್ನೂ ಮಾಡುತ್ತಾ ಕಾಲ ಕಳೆಯಬಾರದು. ಆಟಪಾಟಗಳಲ್ಲಿ ಅವರನ್ನು ಸೇರಿಸಿಕೊಂಡು, ಅದನ್ನೇ ಮರಿಗಳ ಶಿಕ್ಷಣವೆಂದು ಹೇಳುತ್ತಾ ಕ್ರಮಕ್ರಮವಾಗಿ ವಿವರಣೆಯೂ ಮಾಡಿ ಸರಿಯಾದ ಅರ್ಥವನ್ನು ಅವರು ಗ್ರಹಿಸುವಂತೆಯೂ ಅದರಂತೆ ಆಚರಿಸುವಂತೆಯೂ ಪ್ರೇರೇಪಿಸಬೇಕು. ಅಂದರೆ ಮರಿಗಳಾಗಬೇಕೆಂಬ ಕುತೂಹಲವು ಅವರಲ್ಲಿ ಹೆಚ್ಚಾಗಿದೆ ಎಂದು ತೀವ್ರವಾಗಿ ಕೋಮಲಪಾದದ ಶಿಕ್ಷಣವನ್ನು ಮುಗಿಸಕೂಡದು. ಸ್ವಲ್ಪವೇ ಎಂದು ಅಲ್ಲಗಳೆಯದೆ, ಅದು ಅವರಿಗೆ ಚೆನ್ನಾಗಿ ಕಾಯ, ವಾಚ, ಮನಸ ಮುಂದಟ್ಟುವಂತೆ ಮಾಡಬೇಕು. ಭಾಷೆಯ ವಿಚಾರವನ್ನು ವಿಶದವಾಗಿ ತಿಳಿಸಿ, ಆಮೇಲೆ ನಿಯಮದ ವಿಚಾರವಾಗಿ ಒಂದೆರಡು ಮಾತುಗಳನ್ನು ಹೇಳಿ, ಅವುಗಳನ್ನು ಕಾರ್ಯತಃ ತೋರಿಸಲು ಒಂದೆರಡು ಆಟಗಳನ್ನು ಆಡಿಸಬೇಕು. ಭಾಷೆ ಮತ್ತು ನಿಯಮಗಳಲ್ಲಿರುವ ಮೂಲತತ್ವವನ್ನು ಗ್ರಹಿಸಿ ಆಚರಣೆಯಲ್ಲಿ ತಂದುಕೊಳ್ಳುವಂತೆ ಮಾಡಬೇಕು. ಭಾಷೆ ಮತ್ತು ನಿಯಮಗಳ ವಿಚಾರವಾಗಿ ಮಾತನಾಡುತ್ತಿರುವಾಗ ಬಹಳ ಗಂಭೀರತೆಯಿಂದ ಇರಬೇಕು. ಹುಡುಗರಿಗೆ ಅವುಗಳಲ್ಲಿ ಗೌರವವು ಹುಟ್ಟುವಂತೆ ಮಾಡಬೇಕು. ಭಾಷೆ ಮತ್ತು ನಿಯಮಗಳ ಅರ್ಥವನ್ನು ಸರಿಯಾಗಿ ಹೇಳಿಕೊಟ್ಟಲ್ಲದೆ, ದೀಕ್ಷೆಯ ಮಹತ್ವವು ಅವರಿಗೆ ತಿಳಿಯುವುದಿಲ್ಲ. ಹೀಗೆ ಅವರನ್ನು ಅನೇಕಾವರ್ತಿ ಪರೀಕ್ಷಿಸಿ, ಸರಿಯಾಗಿ ತೋರಿಬಂದಲ್ಲದೆ ದೀಕ್ಷೆ

ಯನ್ನು ಕೊಡಿಸಬಾರದು. ಈಕಾಲದಲ್ಲೇ ಅವರನ್ನು ಪ್ರತ್ಯೇಕವಾಗಿ ಪ್ರತಿಯೊಂದು ಗುಣದಲ್ಲಿಯೂ ಪರೀಕ್ಷಿಸುತ್ತಿರಬೇಕು.

ಹುಡುಗರೊಂದಿಗೆ ನೀವು ಸ್ನೇಹದಿಂದಲೇ ಇರಬೇಕು. ಆದರೆ ಅವರು ನಿಮ್ಮ ಅಂಕೆಗೆ ಒಳಪಟ್ಟಿರಬೇಕೆಂಬುದನ್ನು ಮರಿಯಕೂಡದು. ಆಗಾಗ ಮೊದಲನೆಯ ನಿಯಮ ವನ್ನು ಅವರಿಗೆ ಜ್ಞಾಪಿಸುತ್ತಿರಬೇಕು.

ನೀವು ಜೇಬಿಗೆ ಹಿಡಿಸುವಂತಹ ಒಂದು ಗಟ್ಟಿ ಬೈಂಡಿನ ಪುಸ್ತಕವನ್ನು ಇಟ್ಟು ಕೊಂಡು, ಅದರಲ್ಲಿ ಗುಂಪಿನ ಮರಿಗಳ ಹೆಸರು, ವಿಳಾಸ, ಓದುವ ಶಾಲೆ, ಆರೋಗ್ಯ ವಿಚಾರ, ಮತ್ತು ಇತರ ಮುಖ್ಯ ವಿಷಯಗಳನ್ನು ಬರೆದಿಟ್ಟಿರಬೇಕು ; ಅಲ್ಲದೆ ಕ್ಲಾಸಿನ ಕಾರ್ಯಕ್ರಮದ ಪಟ್ಟಿಯೂ, ಸಲಹೆಗಳಿಗಾಗಿ ಕೆಲವು ಖಾಲಿ ಹಾಳೆಗಳೂ ಇರಬೇಕು. ಸರಿಯಾಗಿ ಎಚ್ಚರಿಕೆಯಿಂದ ಇಟ್ಟ ಪುಸ್ತಕವು ಬಹಳ ಸಹಾಯಕವಾಗಿರುವುದು.

## ನಾಯಕರು

ಮರಿಗಳು ದೀಕ್ಷೆಯನ್ನು ಪಡೆಯುವುದಕ್ಕೆ ಒಂದೆರಡು ವಾರಗಳ ಮುಂಚೆ, ಅವರನ್ನು ಆರರಂತೆ ವಿಭಾಗಿಸಿ, ಒಂದೊಂದು ಭಾಗಕ್ಕೆ ಆ ಆರರಲ್ಲೇ ಒಬ್ಬೊಬ್ಬ ನಾಯಕನನ್ನು ಚುನಾಯಿಸಬೇಕು. ನಾಯಕರನ್ನು ಚುನಾಯಿಸುವುದರಲ್ಲಿ ನೀವು ಗಮನಿಸಬೇಕಾದ ಕೆಲವು ವಿಷಯಗಳಿವೆ. ನಾಯಕನಾಗುವ ಮರಿಯ ಮನಸ್ಸು, ಬುದ್ಧಿ, ನಡೆನುಡಿಗಳು, ಹುಡುಗರನ್ನು ಸರಿಯಾದ ರೀತಿಯಲ್ಲಿ ನಡೆಸಿಕೊಂಡು ಹೋಗುವ ಶಕ್ತಿ, ಶಿಕ್ಷಣ ವಿಚಾರಗಳನ್ನು ಮುಂಗಡವಾಗಿ ನಿಮ್ಮಿಂದ ಕಲಿತು ಆಮೇಲೆ ತನ್ನ ಪಂಗಡ ದವರಿಗೆ ಹೇಳಿಕೊಡುವ ಚಮತ್ಕಾರ, ಈ ಬುದ್ಧಿವಂತಿಕೆಗಳೆಲ್ಲಾ ಇರಬೇಕು. ಹುಡುಗರು ಗುಂಪಿಗೆ ಸೇರಿದಾಗಿನಿಂದಲೂ ನೀವು ಪ್ರತಿಯೊಬ್ಬರ ಮೇಲೂ ನಿಗಾ ಇಟ್ಟು, ಯಾರು, ಯಾರು ನಾಯಕರಾಗಲು ಲಾಯಃಕ್ ಇದ್ದಾರೆ ಎಂಬುದನ್ನು ನೋಡುತ್ತಿರಬೇಕು.

ನಾಯಕರನ್ನು ಚುನಾಯಿಸಿದ ನಂತರ ಅವರಿಗೆ ಅವರವರ ಕರ್ತವ್ಯಗಳ ವಿಚಾರ ವಾಗಿ ಪ್ರತ್ಯೇಕವಾಗಿ ತಿಳಿಸಬೇಕು. ಒಂದೊಂದು ಪಂಗಡಕ್ಕೂ ಬೇಕಾದ ಸಾಮಾನು ಗಳನ್ನು ಆಯಾ ಪಂಗಡದ ನಾಯಕರ ವಶಕ್ಕೆ ಕೊಟ್ಟುಬಿಡಬೇಕು. ಅವುಗಳನ್ನು ಜೋಪಾನವಾಗಿಟ್ಟುಕೊಂಡಿರುವುದು ಅವರ ಭಾರ.

ದೀಕ್ಷೆಯನ್ನು ಪಡೆಯುವುದಕ್ಕೆ ಮುಂಚೆ ಯಾರೂ ಸಮರೂಪವನ್ನು ಧರಿಸಲೇ ಕೂಡದು.

## ಒಂದು ತಾರೆ

ಕೋಮಲಪಾದದ ಶಿಕ್ಷಣವು ಮುಗಿದ ತರುವಾಯ, ದೀಕ್ಷೆಯನ್ನು ಪಡೆದ ಮೇಲೆ ಒಂದು ತಾರೆಯ ಕೆಲಸಕ್ಕೆ ಪ್ರಾರಂಭಿಸಬೇಕು. ನಾಯಕರಿಗೆ ಮೊದಲು ಶಿಕ್ಷಣವನ್ನು ಕೊಟ್ಟು, ಆಮೇಲೆ ಅವರು ಅದನ್ನು ಚೆನ್ನಾಗಿ ತಿಳಿದುಕೊಂಡು ತಮ್ಮ ತಮ್ಮ ಪಂಗಡಗಳಿಗೆ ಹೇಳಿಕೊಡುವಂತೆ ಮಾಡುವುದು ಉಚಿತ. ಹೀಗೆ ಹೇಳಿಕೊಡುತ್ತಿರುವಾಗ ನೀವು ಅವರೊಡನೆಯೇ ಇದ್ದು ನೋಡಿಕೊಳ್ಳುತ್ತಿರಬೇಕು.

ನೀವು ಒಂದು ಕ್ಲಾಸಿನಲ್ಲಿ ಮಾಡಬೇಕೆಂದಿರುವ ಕೆಲಸಗಳನ್ನು ಒಂದು ಪುಸ್ತಕದಲ್ಲಿ ಗುರ್ತುಹಾಕಿಕೊಂಡು, ಅವಕ್ಕೆ ತಯಾರಾಗಿ ಬಂದಿರಬೇಕು. ಇದು ಮುಖ್ಯ ಮತ್ತು ಉಪಯೋಗಕರ. ಅದು ಬಿಟ್ಟು ಏನು ಮಾಡಬೇಕೆಂಬ ಗುರಿಯೇ ಇಲ್ಲದೆ ಅಲ್ಲಿಗೆ ಹೋದಮೇಲೆ ನೋಡಿಕೊಳ್ಳೋಣ ಎಂದು ಕ್ಲಬ್ ರೂಮಿಗೆ ಬರುವುದು ಅಪರಾಧ. ಕೆಲವು ತಿಂಗಳುಗಳ ಕಾರ್ಯಕ್ರಮಗಳ ಪಟ್ಟಿಯನ್ನು ಮೊದಲೇ ಏರ್ಪಡಿಸಿಕೊಂಡಿರಬೇಕು. ನೀವು ಆಡಿಸುವ ಆಟ, ಹೇಳುವ ಪಾಠ, ಕಥೆ ಎಲ್ಲವೂ ಸಿದ್ಧವಾಗಿರಬೇಕು. ಹುಡುಗರು ಇಂತಹ ಸಿದ್ಧತೆಯನ್ನು ಇಚ್ಛಿಸುತ್ತಾರೆ; ಮತ್ತು ಕ್ಲಾಸುಗಳಿಗೂ ಉತ್ಸಾಹದಿಂದ ಹೊತ್ತಿಗೆ ಸರಿಯಾಗಿ ಬರುತ್ತಾರೆ. ಏನು ಹೇಳಿಕೊಡಬೇಕು ಎಂದು ತಿಳಿದಿದ್ದ ಮಾತ್ರಕ್ಕೇ ಸಾಲದು. ಅದನ್ನು ಹೇಗೆ ಹೇಳಿಕೊಡಬೇಕು ಎಂಬುದೂ ಮುಖ್ಯ.

ಕೆಲಸಗಳನ್ನು ನೀವು ಹೀಗೆಯೇ ಮಾಡಬೇಕು, ಹಾಗೆಯೇ ಮಾಡಬೇಕು ಎಂದು ವಿಧಿಸುವುದು ಕಷ್ಟ. ನಿಮ್ಮ ಅನುಕೂಲಕ್ಕೆ ತಕ್ಕಂತೆ ಪಟ್ಟಿಯನ್ನು ರಚಿಸಿಕೊಳ್ಳಬೇಕು. ಆದರೆ ಸಾಧಾರಣವಾಗಿ ಪ್ರತಿಯೊಂದು ಕ್ಲಾಸಿನಲ್ಲಿಯೂ ಹೀಗೆ ಮಾಡಬೇಕು.

ಕವಾತ್‌ನಿಂದ ಪ್ರಾರಂಭಿಸಿ, ಶಿಕ್ಷಣವನ್ನು ಕೊಟ್ಟು, ವಿನೋದವಾದ ಆಟ ಮತ್ತು ಕಥೆಯಿಂದ ಮುಗಿಸಬೇಕು. ಕಾಲು ಗಂಟೆಗಿಂತಲೂ ಹೆಚ್ಚಾಗಿ ಯಾವುದನ್ನೂ ಮಾಡಕೂಡದು. ಹೆಚ್ಚಾದರೆ ಮರಿಗಳು ಬೇಜಾರುಪಟ್ಟುಕೊಳ್ಳುತ್ತಾರೆ.

### ಒಂದು ಕಾರ್ಯಕ್ರಮ

| | | |
|---|---|---|
| ಸಾಯಂಕಾಲ ಗಂಟೆ. | ೫-೩೦ | ಕವಾತ್, ಹಾಜರಿ ಇತ್ಯಾದಿ. |
| ,, | ೫-೪೫ | ನಿಮ್ಮ ಮಾತು; ತಾರೆಯ ಕೆಲಸಗಳ ವಿಷಯ. |
| ,, | ೬-೧೫ | ನಾಯಕರಿಂದ ಪಂಗಡಗಳ ತಯಾರಿ. |
| ,, | ೬-೩೦ | ಆಟಗಳು. |
| ,, | ೬-೪೫ | ಕಥೆ. |
| | | ಕಾಯೌ ಶ್ರೀಗೌರಿ. |

ನೀವು ತಿಳಿಸಿದ ವಿಷಯಗಳನ್ನು ನಾಯಕರು ತಮ್ಮ ತಮ್ಮ ಜಂಗೆಡದವರಿಗೆ ಹೇಳಿಕೊಟ್ಟ ನಂತರ ಒಂದು ಸಣ್ಣ ಪರೀಕ್ಷೆಯನ್ನು ಇಟ್ಟುಕೊಳ್ಳಬೇಕು. ಈ ಪರೀಕ್ಷೆಯಲ್ಲಿ ಸರಿಯಾಗಿರುವವರನ್ನೇ ನಿರ್ದಾಕ್ಷಿಣ್ಯವಾಗಿ ಚುನಾಯಿಸಿ, ಇತರರಿಗೆ ಒಂದು ವಾರ ಅವಧಿಯನ್ನು ಕೊಟ್ಟು ಪುನಃ ಪರೀಕ್ಷಿಸಬೇಕು.

ಒಂದು ತಾರೆಯ ಕೆಲಸಗಳಿಗೆ ಪ್ರತಿಯೊಬ್ಬ ಮರಿಗೂ ಈ ಕೆಳಗೆ ಕೊಟ್ಟಿರುವ ರೀತಿಯ ಒಂದೊಂದು ಕಾರ್ಡನ್ನು ಮಾಡಿಕೊಡಬೇಕು ; ಕೆಲಸಗಳಲ್ಲಿ ಉತ್ತೀರ್ಣನಾದಂತೆಲ್ಲಾ ರುಜುವನ್ನು ಮಾಡಬೇಕು.

| ಮರಿ—ಕೃಷ್ಣಮೂರ್ತಿ<br>ಒಂದು ತಾರೆ. | |
| --- | --- |
| ಮೈಸೂರು ಧ್ವಜ.<br>ಗಂಟುಗಳು.<br>ಪಲ್ಟಿ, ಇತ್ಯಾದಿ.<br>ಹಗ್ಗದಿಂದ ಕುಪ್ಪಳಿಸುವುದು, ಇತ್ಯಾದಿ.<br>ಶುಚಿತ್ವ.<br>ಗಂಟೆ ಹೇಳುವುದು.<br>ಸೇವೆ. | ................<br>ಪರೀಕ್ಷಕರು |

ಪರೀಕ್ಷೆಯಲ್ಲಿ ಉತ್ತೀರ್ಣರಾದವರಿಗೆ ಒಂದು ತಾರೆಯನ್ನು ಕೊಡುವಾಗ ಇದ್ದದ್ದರಲ್ಲಿ ಶೋಭಾಯಮಾನವಾದ ಸಮಾರಂಭವನ್ನೇ ಏರ್ಪಡಿಸಿ, ಅವರು ಪಟ್ಟ ಕಷ್ಟಕ್ಕೆ ಬಂದ ಬಹುಮಾನವು ಅಮೂಲ್ಯವಾದದ್ದೆಂದು ಹೇಳಿ, ಅದರಲ್ಲಿ ಅವರಿಗೆ ಅಭಿಮಾನವಿರುವಂತೆ ಮಾಡಬೇಕು.

ಮರಿಗಳು ಪ್ರತಿದಿನವೂ ಒಂದಿಷ್ಟು ವ್ಯಾಯಾಮವನ್ನು ಕ್ಲಬ್ ರೂಮಿನಲ್ಲಾಗಲೀ ತಮ್ಮ ತಮ್ಮ ಮನೆಗಳಲ್ಲಾಗಲಿ ಕ್ರಮವಾಗಿ ತೆಗೆದುಕೊಳ್ಳುವಂತೆ ಏರ್ಪಡಿಸಬೇಕು. ಪ್ರತಿಯೊಬ್ಬ ಮರಿಗೂ ಅವನವನ ಯೋಗ್ಯತಾನುಸಾರವಾಗಿ ಅಭ್ಯಾಸಗಳನ್ನು ಕೊಡುವುದುತ್ತಮ, ಶಕ್ತಿಗೆ ಮೀರಿದ ಅಭ್ಯಾಸಗಳನ್ನು ಬಲವಂತದಿಂದ ಮಾಡಿಸಕೂಡದು. ವ್ಯಾಯಾಮದಲ್ಲಿಯೂ ಮಿತಿಯಿರುವುದು ಒಳ್ಳೆಯದು. ಕ್ಲಬ್ ರೂಮಿನಲ್ಲಿ ಮರಿಗಳ ಕಾಯಕ ಅಭಿವೃದ್ಧಿಯನ್ನು ತೋರಿಸುವ ನಕ್ಷೆಯನ್ನು ಇಟ್ಟಿರಬೇಕು; ಮತ್ತು ಮೂರು ತಿಂಗಳಿಗೊಂದಾವರ್ತಿ ಅವರ ಎತ್ತರ, ತೂಕ, ಎದೆಯ ಸುತ್ತಳತೆ, ಮುಂತಾದುವುಗಳ ತಪಶೀಲನ್ನು ಬರೆಯುತ್ತಿರಬೇಕು. ನೈರ್ಮಲ್ಯದ ವಿಚಾರವನ್ನೆಲ್ಲಾ ಹೇಳಿ, ಅವನ್ನು ಆಚರಣೆಗೆ ತರುವಂತೆ ಮಾಡಬೇಕು.

ನೀವು ಕಾಲಕ್ಕೆ ಸರಿಯಾಗಿ ಕೆಲಸಮಾಡಬೇಕು. ಹೊತ್ತಾಗಿ ಬರಕೂಡದು. ಏಕೆಂದರೆ ನಿಮ್ಮನ್ನು ನೋಡಿಕೊಂಡು ಮರಿಗಳೂ ಹೊತ್ತಾಗಿ ಬರಲು ಪ್ರಾರಂಭಿಸುತ್ತಾರೆ. ಕ್ಲಾಸುಗಳನ್ನು ಯಾವಾಗಲೂ ಕೊಠಡಿಗಳಲ್ಲಿ ಇಟ್ಟುಕೊಳ್ಳಕೂಡದು—ಬೈಲುಗಳಲ್ಲೇ. ಮರಿಗಳನ್ನು ಹೊತ್ತಿಗೆ ಮುಂಚೆ ಮನೆಗಳಿಗೆ ಕಳುಹಿಸಬೇಕು. ಕತ್ತಲಾಗುವವರೆಗೂ ಇಟ್ಟುಕೊಂಡಿರಬಾರದು ಕ್ಲಾಸುಗಳನ್ನು ನಿಷ್ಕಾರಣವಾಗಿ ಮುಂದಕ್ಕೆ ತಳ್ಳುತ್ತಿರಬೇಡಿ. ಇದರಿಂದ ಅವರಿಗೆ ಬೇಜಾರು ಹತ್ತಿ ಗುಂಪನ್ನು ತಾವು ಬಿಟ್ಟುಹೋಗುವುದಲ್ಲದೆ ಇತರರನ್ನೂ ಸೇರದಂತೆ ಮಾಡುತ್ತಾರೆ.

## ಹೊಸ ಹುಡುಗರನ್ನು ಸೇರಿಸುವಿಕೆ

ನಿಮ್ಮ ಮೊದಲನೆಯ ಹನ್ನೆರಡು ಮರಿಗಳು ಒಂದು ತಾರೆಯನ್ನು ಹೊಂದಿದರೆಂದರೆ ಹೊಸ ಹುಡುಗರನ್ನು ಸೇರಿಸಿಕೊಳ್ಳುವ ಪ್ರಯತ್ನವನ್ನು ಮಾಡಬಹುದು.

ಈಗ ಹಳಬರ ಸ್ನೇಹಿತರಾದ ಅಥವ ಇತರ ಹುಡುಗರು ನಿಮ್ಮ ಗುಂಪಿಗೆ ಬಂದರೆ ಅವರಿಗೆ ಹಳಬರಿಂದಲೇ ಇದುವರೆವಿಗೂ ಕಲಿತ ವಿಚಾರಗಳನ್ನು ಹೇಳಿಸಬಹುದು. ಹಳಬರ ಹೆಚ್ಚಾದ ಉತ್ಸಾಹವನ್ನು ಸರಿಯಾದ ಮಾರ್ಗದಲ್ಲಿ ನಡೆಯಿಸಿಕೊಂಡು ಹೋಗಲು ಇದೇ ಉಪಾಯ. ಇದರಿಂದ ಅವರಿಗೆ ತಮ್ಮ ಒಂದು ತಾರೆಯ ಕೆಲಸಗಳು ಇನ್ನೂ ಚೆನ್ನಾಗಿ ತಿಳಿಯುವಂತೆ ಆಗುವುದಲ್ಲದೆ, ಜೊತೆಯಲ್ಲಿಯೇ ಎರಡು ತಾರೆಯ ಕೆಲಸಗಳನ್ನೂ ಅಭ್ಯಾಸಮಾಡಲು ಅನುಕೂಲವಾಗುವುದು.

ಪ್ರಥಮದಲ್ಲಿ ಹನ್ನೆರಡು ಹುಡುಗರಿಗಿಂತ ಹೆಚ್ಚಾಗಿ ಸೇರಿಸಿಕೊಳ್ಳಕೂಡದೆಂದು ಮೊದಲೇ ಹೇಳಿದೆ. ಈಗ ಹೆಚ್ಚಿನ ಹುಡುಗರೆಂದರೆ ಇನ್ನು ಆರು ಮಾತ್ರ. ಇದರಿಂದ ಈ ಹೊಸಬರ ಗುಣಗಳನ್ನು ತಿಳಿದುಕೊಳ್ಳಲು ಅನುಕೂಲವಾಗುತ್ತದೆ. ಏಕೆಂದರೆ ಪ್ರತಿಯೊಬ್ಬನ ಗುಣಗಳನ್ನೂ ತಿಳಿದು ತಿದ್ದಬೇಕೆಂಬುದೇ ನಿಮ್ಮ ಧ್ಯೇಯವಲ್ಲವೇ !

ನಿಮ್ಮ ಹಳಬರೆಲ್ಲರೂ ಒಂದು ತಾರೆಯ ಮರಿಗಳಾಗಿದ್ದಲ್ಲಿ ಹೊಸಬರು ಅವರಲ್ಲಿ ಒಂದು ಪೂಜ್ಯಬುದ್ಧಿಯನ್ನಿಟ್ಟುಕೊಳ್ಳಲು ಅವಕಾಶವಿರುತ್ತದೆ. ಈ ಪೂಜ್ಯಬುದ್ಧಿಯಿಂದ ಗುಂಪಿನಲ್ಲಿ ನಡತೆ, ನುಡಿ ಮತ್ತು ಶೀಲಭಾವಗಳು ಏಕರೀತಿಯಲ್ಲಿ ನಡೆದುಬರುತ್ತವೆ.

ಮರಿಗಳಲ್ಲಿ ಆತ್ಮಾವಲಂಬನೆಯು ಬರಬೇಕಾದರೆ ಈ ಹೊಸಬರು ಅದಕ್ಕೆ ಸ್ವಲ್ಪ ಕಾರಣಕರ್ತರು. ಹೊಸಬರು ಬಂದಮೇಲೆ ನಿಮ್ಮ ಲಕ್ಷ್ಯವು ಅವರ ಮೇಲೆ ಇರಬೇಕು ; ಅಂದರೆ ಹಳಬರನ್ನು ಬಿಟ್ಟುಬಿಡಬೇಕೆಂದಲ್ಲ. ಮೊದಲಿಗಿಂತ ಸಿಗ ಸ್ವಲ್ಪ ಕಮ್ಮಿ ಮಾಡಬೇಕು ಅಷ್ಟೆ.

ಈ ಸಂದರ್ಭದಲ್ಲಿ ಹಳ ಮತ್ತು ಹೊಸಬರನ್ನು ಕೂಡಿಸಿ ಬೇರೆ ಬೇರೆ ಪಂಗಡಗಳನ್ನಾಗಿ ಮಾಡಿ ಪ್ರತಿ ಒಂದರಲ್ಲೂ ಇಬ್ಬರೂ ಒಟ್ಟಿಗೆ ಸೇರಿ ಕೆಲಸಮಾಡುವಂತೆ ಮಾಡಬೇಕು. ಹೊಸಬರೂ ಸಹ ಹಳಬರು ಕಲಿತ ರೀತಿಯಲ್ಲಿಯೇ ಎಲ್ಲವನ್ನೂ ಕಲಿಯಬೇಕು. ಮೊದಲು ಈ ಹೊಸಬರಿಂದ ಹಳಬರಿಗೆ ಸ್ವಲ್ಪ ತೊಂದರೆಯಾದಂತೆ ಆಗಬಹುದು. ಆದರೆ ಕೆಲವು ದಿವಸಗಳಲ್ಲಿಯೇ ಎಲ್ಲವೂ ಸರಿಹೋಗುವುದು.

ಹೊಸಬರಿಗೆ ದೀಕ್ಷೆಯನ್ನು ಕೊಡಿಸುವಾಗ ಹಿಂದಿನಂತೆಯೇ ಗಂಭೀರವಾದ ಒಂದು ಸಮಾರಂಭವನ್ನು ಏರ್ಪಡಿಸಬೇಕು. ಆ ಕಾಲದಲ್ಲಿ ಹಳಬರು ತಮ್ಮ ಭಾಷೆಯನ್ನು ಪುನಃ ಹೇಳುತ್ತಾರೆ. ಆಗ ಅವರು ಇದುವರೆಗೂ ಎಷ್ಟರಮಟ್ಟಿಗೆ ಅದರಂತೆ ನಡೆದುಕೊಂಡರೆಂಬುದು ಅವರ ಮನಸ್ಸೇ ಹೇಳುತ್ತದೆ. ತಿದ್ದುಕೊಳ್ಳಬೇಕಾಗಿದ್ದಲ್ಲಿ ಅಂಥಾ ಸಂಭವವೂ ಉಂಟು.

## ಎರಡು ತಾರೆ

ಒಂದು ತಾರೆ ಮರಿಗಳು ಹೊಸಬರೊಡನೆ ಒಂದು ತಾರೆಯ ಕೆಲಸಗಳನ್ನು ಜ್ಞಾಪಿಸಿಕೊಳ್ಳುತ್ತಿದ್ದು, ಜೊತೆಯಲ್ಲಿ ಎರಡು ತಾರೆಯ ಕೆಲಸಗಳನ್ನೂ ಕಲಿಯಬೇಕು.

ಆದರೆ ಒಂದು ತಾರೆಯು ಬಂದ ಕೂಡಲೆ ಎರಡು ತಾರೆಯ ಕೆಲಸಗಳಿಗೆ ಷುರು ಮಾಡಬಾರದು. ಏಕೆಂದರೆ ಶಿಕ್ಷಣವು ಮರಿಗಳಿಗೆ ಬೇಜಾರಾಗಿ ಪರಿಣಮಿಸುತ್ತದೆ. ಇದರಿಂದ ಅವರ ಆಸಕ್ತಿಯೂ ಕಮ್ಮಿಯಾಗಬಹುದು. ಅಂದರೆ ಕಾಲವನ್ನು ಸುಮ್ಮನೆ ಕಳೆಯಬೇಕೆಂದಲ್ಲ. ಏತನ್ಮಧ್ಯೆ ಪ್ರವೀಣತೆಯ ಪದಕಗಳಿಗೆ ಅಭ್ಯಾಸಮಾಡಿಸಬಹುದು. ಪ್ರವೀಣತೆಯ ಪದಕಗಳನ್ನು ಎರಡು ತಾರೆಯು ಬಂದ ಹೊರತು ಕೊಡುವುದಿಲ್ಲವಾದರೂ ಈಗ ಗೆದ್ದಿದ್ದರೆ ಆ ಮೇಲೆ ತೆಗೆದುಕೊಳ್ಳಬಹುದು.

ಎರಡು ತಾರೆಯ ಕೆಲಸಗಳಲ್ಲಿ ಕೆಲವನ್ನು ನೀವು ಹೇಳಿಕೊಡಬೇಕಾಗಿದ್ದರೂ ಅವರೇ ಸ್ವತಃ ಮಾಡಬೇಕಾದ ಕೆಲಸಗಳು ಅನೇಕವಿವೆಯಲ್ಲವೆ! ಈ ತಾರೆಯನ್ನು ಮರಿಗಳೇ ಕಷ್ಟಪಟ್ಟು ತಾವಾಗಿಯೇ ಸಂಪಾದಿಸಬೇಕು. ಈ ತಾರೆಯ ಕೆಲಸಗಳನ್ನು ಎಲ್ಲರೂ ಏಕಕಾಲದಲ್ಲಿ ಪ್ರಾರಂಭಿಸಿದರೂ ಒಂದೇ ಕಾಲದಲ್ಲಿಯೇ ತಾರೆಯನ್ನು ಸಂಪಾದಿಸಲಾರರು. ಏಕೆಂದರೆ ಹಿಂದೆ ಹೇಳಿದಂತೆ ಮರಿಗಳು ಸ್ವತಃ ಮಾಡಬೇಕಾದ ಕೆಲಸಗಳು ಅತಿಯಾಗಿವೆ; ಅಲ್ಲದೆ ಉತ್ಸಾಹಗಳೂ, ಕ್ರಿಯಾಶಕ್ತಿಗಳೂ ಎಲ್ಲರಲ್ಲಿಯೂ ಒಂದೇ ಸಮನಾಗಿರುವುದಿಲ್ಲ.

ಈ ಎರಡು ತಾರೆಯ ಕೆಲಸಗಳಿಗೂ ಪ್ರತಿಯೊಬ್ಬ ಮರಿಗೂ ಈ ಕೆಳಗೆ ಕೊಟ್ಟಿರುವ ರೀತಿಯ ಒಂದೊಂದು ಕಾರ್ಡನ್ನು ಮಾಡಿಕೊಡಬೇಕು; ಕೆಲಸಗಳಲ್ಲಿ ಉತ್ತೀರ್ಣನಾದಂತೆಲ್ಲಾ ರುಜುವನ್ನು ತೆಗೆದುಕೊಳ್ಳಬೇಕು.

| ಮರಿ—ಕೃಷ್ಣಮೂರ್ತಿ<br>ಎರಡು ತಾರೆ. | | | |
|---|---|---|---|
| ಅಕ್ಷರ ಸಂಕೇತ.<br>ಉತ್ತರಮುಖಿ.<br>ಕಾಯೌ ಶ್ರೀಗೌರಿ.<br>ವಂದೇಮಾತರಂ.<br>ಬ್ಯಾಂಕ್.<br>ಮಾದರಿ. | | ಮನೆ ಕೆಲಸ.<br>ಬಾಯಿ ವರ್ತಮಾನ.<br>ವ್ಯಾಯಾಮ.<br>ಪ್ರಥಮ ಚಿಕಿತ್ಸೆ.<br>ಸೇವೆ. | ..............<br>ಪರೀಕ್ಷಕರು. |

ಎಷ್ಟೋ ಮರಿಗಳು ಪರೀಕ್ಷೆಯ ಉದ್ದೇಶದಿಂದ ಮಾತ್ರ ವಿಷಯಗಳನ್ನು ಕಲಿಯುತ್ತಾರೆ. ಹಾಗೆ ಅವರು ಮಾಡದೆ ಅವುಗಳನ್ನು ಯಾವಾಗಲೂ ಅಭ್ಯಾಸಮಾಡುತ್ತ ಮರೆಯದಂತೆ ನೋಡಿಕೊಳ್ಳಬೇಕು.

## ಪ್ರವೀಣತೆಯ ಪದಕಗಳು

ಪ್ರವೀಣತೆಯ ಪದಕಗಳು ಮರಿಗಳ ಶಿಕ್ಷಣದ ಒಂದು ಅಂಗ. ಇಲ್ಲಿ ಕಲಿಸತಕ್ಕ ಕೆಲಸಗಳೇ ಆಗಲಿ, ಬುದ್ಧಿ ಕುಶಲತೆಯೇ ಆಗಲಿ ಬಹಳ ಉಪಯೋಗಕಾರಿಯಲ್ಲ. ಆದರೆ ಮಗರಿಗಳ ಶೀಲಸ್ವಭಾವಗಳನ್ನು ಒಟ್ಟುಗೂಡಿಸಲು ಒಂದು ಉಪಾಯವಿದು.

ಸ್ವಲ್ಪ ವಿಷಯಗಳನ್ನು ಕಲಿತ ಮರಿಗಳಿಗೆ ಇನ್ನೂ ಹೆಚ್ಚು ಕಲಿಯಲು ಅವಕಾಶವನ್ನು ಉಂಟುಮಾಡುವುದಕ್ಕೂ, ಅವರಲ್ಲಿರುವ ಸ್ವಾಭಾವಸಿದ್ಧವಾದ ಪ್ರತಿಕ್ರಿಯಾಶಕ್ತಿಯನ್ನು ಹೊರ ಹೊಮ್ಮುವಂತೆ ಮಾಡುವುದಕ್ಕೂ, ಯಾವ ಮರಿಗೆ ಯಾವ ಕೈ ಕೆಲಸದಲ್ಲಿ ಅಭಿರುಚಿಯಿದೆ, ಯಾವ ಕಾರ್ಯದಲ್ಲಿ ಅವನ ಮನಸ್ಸು ಒಲಿಯುತ್ತದೆ ಎಂಬಿವುಗಳನ್ನು ತಿಳಿಯುವುದಕ್ಕೂ, ಅವನು ಯಾವ ಮಾರ್ಗವನ್ನು ಹಿಡಿಯಬಹುದು ಎಂಬುದನ್ನು ಅನಿರೀಕ್ಷಿತವಾಗಿಯಾದರೂ ನೋಡುವುದಕ್ಕೂ ಪ್ರವೀಣತೆಯ ಪದಕಗಳು ಏರ್ಪಟ್ಟಿವೆ. ಆದುದರಿಂದ ನೀವು ಈ ಪದಕಗಳಲ್ಲಿ ಸಾಧ್ಯವಾದಷ್ಟನ್ನು ಅವರಿಗೆ ಹೇಳಿಕೊಟ್ಟು, ಅವರು ಅದನ್ನು ಕಾರ್ಯತಃ ಮಾಡುವಂತೆ ಏರ್ಪಡಿಸಬೇಕು.

ಪದಕಗಳನ್ನು ಪಡೆಯಲು ಮರಿಗಳು ಸಾಧಿಸಬೇಕಾಗಿದೆ. ವಿರಾಮಕಾಲಗಳಲ್ಲಿ ಸ್ವಲ್ಪ ಮೆಹನತ್ತು ಮಾಡಿದಲ್ಲಿ ಹೊಂದಬಹುದು. ಅವರ ಅಭಿರುಚಿಗಳನ್ನು ತಿಳಿದು ಅವರಿಗೆ ತಕ್ಕಂತಿರುವ ಪದಕಗಳಿಗಾಗಿ ಪ್ರಯತ್ನಿಸುವಂತೆ ಮಾಡುವುದು ನಿಮ್ಮ ಕೆಲಸ.

ಈ ಪದಕಗಳಲ್ಲಿ ಶಿಕ್ಷಣ ಕೊಡಿಸುವುದಕ್ಕೆ ನೀವು ಅಷ್ಟೇನೂ ಹೆಚ್ಚು ಪ್ರಯಾಸಪಡ ಬೇಕಾಗಿಲ್ಲ. ಏಕೆಂದರೆ ಅವುಗಳನ್ನು ಬಲ್ಲ ಎಷ್ಟೋ ಮಂದಿ ದೊಡ್ಡ ಮನುಷ್ಯರೂ, ಮಹಿಳೆಯರೂ ಇರುತ್ತಾರೆ. ಏನು ಉಪಕಾರ ಮಾಡಬಹುದೆಂಬುದು ಅವರಿಗೆ ಹೊಳೆ ಯದೆ ಇರುವುದರಿಂದ ಅವರು ತಾವಾಗಿ ಮುಂದೆ ಬಂದಿರುವುದಿಲ್ಲ. ನೀವು ಅಂಥವರನ್ನು ಕೇಳಿಕೊಂಡರೆ ಅವರು ಬಂದು ತಮಗೆ ತಿಳಿದುದನ್ನು ಮರಿಗಳಿಗೆ ಖಂಡಿತವಾಗಿಯೂ ಸಂತೋಷದಿಂದ ಹೇಳಿಕೊಟ್ಟಾರು. ಸ್ಥಳಿಕ ಸ್ಕೌಟು ಸಂಘದವರು ಕೂಡ ಇಂತಹ ಜನಗಳ ಸಹಕಾರವನ್ನು 'ಪದಕ ಸಮಿತಿ' ಗಳ ಮೂಲಕ ಪಡೆದು ಅವಶ್ಯಕವಾದ ಶಿಕ್ಷಣ ವನ್ನು ಏರ್ಪಡಿಸಬಹುದು.

ಇಲ್ಲಿ ಕೂಡ ನಿಮ್ಮ ಕರ್ತವ್ಯವು ನೀವೇ ಹೇಳಿಕೊಡುವುದಲ್ಲ ; ಮರಿಗಳು ತಾವಾ ಗಿಯೇ ಕಲಿಯುವಂತೆ ಸನ್ನಿವೇಶಗಳನ್ನು ಕಲ್ಪಿಸಿ, ಅವರು ಪ್ರತ್ಯೇಕ ಪ್ರತ್ಯೇಕವಾಗಿ ಪರೀಕ್ಷೆ ಕೊಟ್ಟು ಪದಕಗಳನ್ನು ಪಡೆಯುವಂತೆಯೂ ಏರ್ಪಡಿಸುವುದು.

ಒಂದೇ ಪದಕಕ್ಕಾಗಿ ಪ್ರಯತ್ನಿಸುವ ನಾಲ್ಕಾರು ಮರಿಗಳಿದ್ದರೆ, ಅವರಿಗಾಗಿ ಒಂದು ತರಗತಿಯನ್ನು ಏರ್ಪಡಿಸಬಹುದು. ಇಂತಹ ತರಗತಿಗಳ ಶಿಕ್ಷಣವನ್ನು ನೀವೇ ಆಗಲಿ ಅಥವಾ ಆ ವಿಷಯದಲ್ಲಿ ಪ್ರವೀಣರಾದ ಇತರ ಖಾಸಗಿ ಮನುಷ್ಯರಾಗಲಿ ಕೊಡ ಬಹುದು. ಈ ಎರಡನೆಯ ಸಂದರ್ಭಗಳಲ್ಲಿ ನೀವು ಮರಿಗಳೊಂದಿಗೆ ಇರಲೇಬೇಕು.

ಹೆಚ್ಚು ಮರಿಗಳಿಗೆ ಅಭಿರುಚಿಯಿಲ್ಲದ ಅಥವಾ ಅವರೇ ಸ್ವತಃ ಕಲಿತುಕೊಳ್ಳ ಬಹುದಾದ ಪದಕಗಳಿಗೆ ನೀವು ಆಗಾಗ್ಯೆ ಅವರು ಮಾಡಿದ ಕೆಲಸಗಳನ್ನು ನೋಡಿ, ಸಮಯೋಚಿತವಾದ ಸಲಹೆಗಳನ್ನು ಕೊಡುತ್ತಾ, ಪರೀಕ್ಷೆಗೆ ಹೊರಡುವುದಕ್ಕೆ ಮುಂಚೆ ಅವರನ್ನು ಒಂದು ಸಲ ಪರೀಕ್ಷಿಸಿ ತಕ್ಕಂತಿದ್ದರೆ ಕಳುಹಿಸಬೇಕು

ಪರೀಕ್ಷೆಯಾದನಂತರ ಮರಿಗಳು ತಮ್ಮಲ್ಲಿರುವ ಪ್ರವೀಣತೆಗಳನ್ನು ಕಾರ್ಯತಃ ಉಪಯೋಗಿಸಲು ಸಂದರ್ಭಗಳನ್ನು ಒದಗಿಸಿಕೊಳ್ಳಬೇಕು ; ಇಲ್ಲವೆ ನೀವು ಒದಗಿಸಿಕೊಡ ಬೇಕು. ಸಮಯಸಿಕ್ಕಿದಾಗ ಅವರನ್ನು ಆಯಾ ಕೆಲಸಗಳಿಗೆ ಹಚ್ಚಬೇಕು.

## ಗುಂಪಿನ ಇತರ ಕಾರ್ಯಕಲಾಪಗಳು

ಮರಿಗಳು ಪ್ರವೀಣತೆಯ ಪದಕಗಳನ್ನು ಪಡೆಯುವುದರಲ್ಲಿಯೇ ತಮ್ಮ ಕಾಲವನ್ನೆಲ್ಲಾ ಕಳೆಯಬಾರದೆಂದು ಆಗಲೇ ಹೇಳಿದೆ. ಏಕೆಂದರೆ ಗುಂಪಿನ ಕೆಲಸಗಳು ಇನ್ನೂ ಅನೇಕವಿವೆ.

## ಪುಸ್ತಕ ಭಂಡಾರ

ಗುಂಪಿಗೆ ಒಂದು ಪುಸ್ತಕ ಭಂಡಾರವು ಅವಶ್ಯಕ. ಇದರಿಂದ ಗುಂಪಿಗೆ ಮಹದುಪಕಾರವಾಗುವುದು. ಮರಿಗಳಿಗೆ ಇದು ತುಂಬಾ ಸಂತೋಷಕಾರಿಯೂ, ಉತ್ಸಾಹಕಾರಿಯೂ ಆಗಿ ಪರಿಣಮಿಸುವುದು. ಸಾಧಾರಣವಾಗಿ ಹುಡುಗರು ಓದುವುದರಲ್ಲಿ ತುಂಬಾ ಆಸಕ್ತಿಯುಳ್ಳವರಾಗಿರುತ್ತಾರೆ. ಸರಿಯಾದ ಪುಸ್ತಕಗಳು ಅನೇಕಾವೃತ್ತಿ ಅವರಿಗೆ ಸಿಕ್ಕುವುದಿಲ್ಲ. ಆಗ ಅವರು ಕೈಗೆ ಸಿಕ್ಕಿದವುಗಳನ್ನೇ ಓದುತ್ತಾರೆ. ಆದುದರಿಂದ ಅವರಿಗೊಂದು ಸರಿಯಾದ ಪುಸ್ತಕ ಭಂಡಾರವನ್ನು ಒದಗಿಸಿಕೊಡುವುದು ಮುಖ್ಯ. ಪುಸ್ತಕ ಭಂಡಾರವೆಂದಮಾತ್ರಕ್ಕೆ ಏನೋ ಅಗಾಧವೆಂದು ಯೋಚಿಸಬೇಕಾಗಿಲ್ಲ. ಮಕ್ಕಳ ಕಥೆಗಳು, ವೀರರ ಕಥೆಗಳು, ಪುರಾಣ ಕಥೆಗಳು, ನೀತಿಮಾರ್ಗ ಬೋಧನೆಯ ಪುಸ್ತಕಗಳು, ಆಟದ ಪುಸ್ತಕಗಳು, ಚಿತ್ರದ ಪುಸ್ತಕಗಳು ಕೆಲ ಕೆಲವಿದ್ದರೆ ಸಾಕು.

ಪುಸ್ತಕಗಳನ್ನು ಓದುವುದು ಹುಡಗರಿಗೆ ಒಂದು ಶೀಲ ಶಿಕ್ಷಣ. ಇದರಿಂದ ಬುದ್ಧಿ ವಿಕಾಸವಿಲ್ಲದೆ ಗುಣ, ಶೀಲ ಮುಂತಾದುವೆಲ್ಲವೂ ವ್ಯವಸಾಯವನ್ನು ಹೊಂದುವುವು. ಇಷ್ಟೇ ಅಲ್ಲ. ಪುಸ್ತಕಗಳನ್ನು ಸರಿಯಾಗಿ ಓದುವ ಒಂದು ಅಭ್ಯಾಸವನ್ನೇ ಮರಿಗಳಿಗೆ ಕಲಿಸಿದಂತಾಗುತ್ತದೆ.

'ಪುಸ್ತಕಗಳನ್ನು ಶೇಖರಿಸುವುದು ಹೇಗೆ?' ಎಂದು ನೀವು ಕೇಳಬಹುದು. ಹೌದು, ಅದೇನೋ ಕಷ್ಟದ ಕೆಲಸವೇ ಸರಿ. ಅದನ್ನೆಲ್ಲಾ ಕೊಂಡುಕೊಳ್ಳಬೇಕೆಂದರೆ ಗುಂಪಿಗೆ ಆ ಯೋಗ್ಯತೆಯು ಇರುವುದಿಲ್ಲ. ಆದುದರಿಂದ ಕಾಲಾ ಕಾಲವರಿತು ಮರಿಗಳ ತಾಯಿತಂದೆಗಳನ್ನು ಹಿಡಿದು, ಯುಕ್ತವಾದ ಉಪಾಯಗಳನ್ನು ಹುಡುಕಿಕೊಳ್ಳಬೇಕು.

ಪುಸ್ತಕಗಳನ್ನು ಕೊಡುವುದಕ್ಕೂ, ಹಿಂದಕ್ಕೆ ತೆಗೆದುಕೊಳ್ಳುವುದಕ್ಕೂ ಮರಿಗಳಲ್ಲಿಯೇ ಒಬ್ಬ ಲೈಬ್ರೆರಿಯನ್ ಅನ್ನು ಏರ್ಪಡಿಸಿದರೆ ಅನುಕೂಲ.

## ಗುಂಪಿನ ಆಡಳಿತ

ನಿಮ್ಮ ಗುಂಪಿನ ನಾಯಕರು ನಿಮಗೆ ಸಹಾಯಕರಾಗಿರಬೇಕಾದರೆ, ಅವರು ನಿಜವಾದ ಉತ್ಸಾಹದಿಂದ ಗುಂಪಿನ ಜೀವನದೊಳಗೆ ಸೇರಿರಬೇಕಾದರೆ, ಅವರ ಕೈ ಕೆಳಗಿರುವ ಐದು ಮರಿಗಳಲ್ಲಿ ನಿಜವಾದ ಮಮತೆಯೂ, ಜವಾಬ್ದಾರಿಯೂ ಅವರಿಗೆ ಮನಗಾಣಬೇಕಾದರೆ, ಗುಂಪಿನಲ್ಲಿ ಆಡಳಿತಗಾರರ ಸಭೆಯೊಂದು ಅತ್ಯಾವಶ್ಯಕ.

ಈ ಸಭೆಯಿಂದ ಎಷ್ಟೋ ಅನುಕೂಲಗಳಿವೆ. ಈ ಸಭೆಗೆ ನೀವು, ಕಿರಿಯಣ್ಣನಿದ್ದರೆ ಅವರು, ನಾಯಕರು ಮತ್ತು ಅವರ ಸಹಾಯಕರು, ಇವರೆಲ್ಲಾ ಸದಸ್ಯರು. ಈ ಸಭೆಯು ಇಷ್ಟು ದಿನಕ್ಕೆ ಒಂದು ಸಲ ಸೇರಬೇಕೆಂಬ ನಿರ್ಬಂಧವಿಲ್ಲ. ಸಮಯ ಬಿದ್ದಾಗಲೆಲ್ಲಾ ಸೇರಬಹುದು. ನೀವೇ ಈ ಸಭೆಗೆ ಅಧ್ಯಕ್ಷರು.

ಈ ಸಭೆಯ ಕೆಲಸಗಳು ಮೂರು ತೆರನಾಗಿರುವುವು : (೧) ಸಲಹೆ ಸೂಚನೆ ; (೨) ಆಡಳಿತ ನಡೆಯಿಸುವುದು ; (೩) ನ್ಯಾಯವನ್ನು ನಿರ್ಧರಿಸುವುದು ; ಈ ಶಬ್ದಗಳೇನೋ ಭಾರಿ. ಆದುದರಿಂದ ಮರಿಗಳ ಮುಂದೆ ನೀವು ಇವುಗಳನ್ನು ಉಪಯೋಗಿಸಲೇ ಬಾರದು. ಈ ಕೆಲಸಗಳನ್ನು ಮಾತ್ರ ಆ ಸಭೆಯಿಂದ ಮಾಡಿಸಬೇಕು.

### ೧. ಸಲಹೆ ಸೂಚನೆ

ಈ ವಿಚಾರಗಳನ್ನು ಮಾಡುವಾಗ ಸಭೆಯ ಸದಸ್ಯರೆಲ್ಲರೂ ಹಾಜರಿರಬೇಕು. ಗುಂಪಿನ ಕಾರ್ಯಕಲಾಪಗಳಲ್ಲಿ ಹೊಸ ಏರ್ಪಾಡುಗಳನ್ನು ಮಾಡುವುದಕ್ಕೂ, ಹೊಸ ವಿಷಯಗಳನ್ನು ಗುಂಪಿನಲ್ಲಿ ಉಪಯೋಗಿಸಿಕೊಳ್ಳುವುದಕ್ಕೂ, ಸಭೆಯ ಸಲಹೆಯನ್ನು ಕೇಳಬೇಕು. ಸದಸ್ಯರೆಲ್ಲರೂ ತಮ್ಮ ತಮ್ಮ ಮತಗಳನ್ನು ನಿರ್ಭೀತಿಯಿಂದ ಹೇಳಬೇಕು. ಸಾಧಾರಣವಾಗಿ ಗುಂಪಿನಲ್ಲಿ ಫುಟ್‌ಬಾಲ್ ಟೀಂ ಒಂದನ್ನು ಮಾಡುವುದು, ಗುಂಪಿಗೆ ಒಂದು ಪುಸ್ತಕ ಭಂಡಾರವನ್ನು ಒದಗಿಸಿಕೊಳ್ಳುವುದು, ಕೂಟಗಳಲ್ಲಿ ಏನು ಮಾಡಬೇಕೆಂಬುದನ್ನು ನಿರ್ಣಯಿಸುವುದು, ಇವೇ ಈ ಸಭೆಯ ಕೆಲಸಗಳು.

### ೨. ಆಡಳಿತ ನಡೆಯಿಸುವುದು

ಗುಂಪಿನ ಆಡಳಿತದಲ್ಲಿ ಯಾವ ವಿಷಯವನ್ನಾದರೂ ಸುಲಭವಾಗಿಯೂ, ಜಾಗ್ರತೆಯಾಗಿಯೂ ನಿರ್ಣಯಿಸಬೇಕಾದರೆ ಈ ಸಭೆಯನ್ನು ಕರೆಯಬೇಕು. ನಿರ್ಣಯದ ಗುರುತುಗಳನ್ನೆಲ್ಲಾ ನೀವು ಹಾಕಿ ಇಟ್ಟುಕೊಂಡಿರಬೇಕು. ಸಾಧಾರಣವಾಗಿ ಹೊಸ ಪಂಗಡಗ

ಳನ್ನು ಮಾಡುವುದು, ನಾಯಕರನ್ನು ಗೊತ್ತುಮಾಡುವುದು, ಗುಂಪಿನ ನಿಯಮವನ್ನು ನಿರ್ಧರಿಸುವುದು, ಇವೇ ಈ ಸಭೆಯ ಕೆಲಸಗಳು.

೩. ನ್ಯಾಯವನ್ನು ನಿರ್ಧರಿಸುವುದು

ಈ ವಿಚಾರಗಳಲ್ಲಿ ನಾಯಕರನ್ನು ಮಾತ್ರ ಕರೆಯಿಸಬೇಕು; ಅಂದರೆ ಅವರ ಸಹಾಯಕರು ಬೇಡ. ಏಕೆಂದರೆ ಏನಾದರೂ ತಪ್ಪಿದ್ದರೆ ಅದು ಕೆಲವರಿಗೆ ಮಾತ್ರ ತಿಳಿದಿದ್ದರೆ ಒಳ್ಳೆಯದು. ಈ ಸಭೆಯಲ್ಲಿ ಮರಿಗಳ ಅವಿಧೇಯತೆ, ಅಯೋಗ್ಯತನ, ಗುಂಪಿನ ನಿಯಮವನ್ನು ತಿರಸ್ಕರಿಸುವುದು, ಇವೇ ಮೊದಲಾದ ವಿಷಯಗಳನ್ನು ಚರ್ಚಿಸಬೇಕು. ಆ ಮೇಲೆ ಆ ಮರಿಯನ್ನು ಕರೆದು, ಅವನ ಹೇಳಿಕೆಯನ್ನೂ ತೆಗೆದುಕೊಂಡು, ಅವರ ಮೇಲೆ ಸದಸ್ಯರ ಅಭಿಪ್ರಾಯಗಳನ್ನೂ ಕೇಳಿ, ನೀವು ಸೂಕ್ತವಾಗಿ ನ್ಯಾಯವನ್ನು ನಿರ್ಧರಿಸಬೇಕು.

ಮರಿಗಳ ಶಿಬಿರ

ಅನೇಕ ಹಿರಿಯಣ್ಣಂದಿರು ಮರಿಗಳನ್ನು ಶಿಬಿರಗಳಿಗೆ ಕರೆದುಕೊಂಡು ಹೋಗುವುದು ಬಹಳ ಜವಾಬ್ದಾರಿಯ ಮತ್ತು ತೊಂದರೆಯ ಕೆಲಸವೆಂದು ತಿಳಿದುಕೊಂಡಿರುತ್ತಾರೆ. ಆದರೆ ಹಾಗಲ್ಲ. ಮರಿಗಳು ಶಿಬಿರಗಳಲ್ಲಿ ಬಹಳ ಉತ್ಸಾಹದಿಂದಿರುತ್ತಾರೆ; ಮತ್ತು ಶಿಬಿರಗಳು ಅವರ ಆರೋಗ್ಯವನ್ನು ತೊಂದರೆಪಡಿಸುವುದಿಲ್ಲ, ಹೆಚ್ಚಿಸುತ್ತವೆ.

ತಮ್ಮ ತಮ್ಮ ಮನೆಗಳನ್ನು ಬಿಟ್ಟು ಹೊರಗಡೆಯಲ್ಲಿ ಹೋಗಿ ಒಂದು ರಾತ್ರಿಯನ್ನು ಕಳೆಯಬೇಕಾದರೂ ಎಷ್ಟೋ ಜನರು ಹೆದರಿಕೊಳ್ಳುವರು. ಇವರಿಗೆಲ್ಲಾ ಹೊರಗಡೆಯ ವಾಸದ ಸುಖವೂ, ಬಯಲಿನಲ್ಲಿ ಮಲಗುವುದರ ಆನಂದವೂ ತಿಳಿಯವು. ಮರಿಗಳು ಚಳಿಗಾಳಿಗಳಿಗೆ ಹೆದರದವರಾಗಿ, ಶ್ರಮಸಹಿಷ್ಣುಗಳಾಗಿ, ದೃಢಕಾಯರಾಗಿ ಬೆಳೆಯಬೇಕೆಂಬುದೇ ಶಿಬಿರಗಳ ಉದ್ದಿಶ್ಯ

ಶಿಬಿರಗಳಲ್ಲಿ ಬೇರೆ ಬೇರೆ ಬಗೆಗಳುಂಟು :

೧. ಹೈಕಿಂಗ್

ಊರಿನ ಸುತ್ತಮುತ್ತಲಿನಲ್ಲಿ ಸಮೀಪದಲ್ಲಿರುವ ಪ್ರದೇಶವನ್ನು ನೋಡಿಕೊಂಡು ಬರುವುದಕ್ಕೆ ಮಧ್ಯಾಹ್ನ ಸುಮಾರು ಮೂರು ಘಂಟೆಗೆ ಹೊರಟು ಸಾಯಂಕಾಲ ಏಳು ಘಂಟೆಯೊಳಗೆ ಹಿಂತಿರುಗಿ ಬರುವುದೇ 'ಹೈಕಿಂಗ್.' ಹೊರಡುವುದಕ್ಕೆ ಮೊದಲು ಅಲ್ಲಿ ಏನುಮಾಡಬೇಕು ಎಂದು ಮುಂತಾಗಿ ಮೊದಲೇ ಆಲೋಚಿಸಿಕೊಂಡಿರಬೇಕು.

೨. ವಾರದ ಕೊನೆಯಲ್ಲಿ ಹೋಗಿ ಹಿಂತಿರುಗುವುದು

ಸಾಮಾನ್ಯವಾಗಿ ಮರಿಗಳಿಗೆಲ್ಲಾ ಶನಿವಾರ ಮಧ್ಯಾಹ್ನ, ಭಾನುವಾರ ರಜಾ ದಿನಗಳಾಗಿರುತ್ತವೆಯಷ್ಟೆ. ಊರಿಗೆ ಐದಾರು ಮೈಲಿಗಳೊಳಗಿರುವ ಯಾವುದಾದರೊಂದು ಮುಖ್ಯ ಪ್ರದೇಶವನ್ನು ನೋಡಿಬರಲು ಶನಿವಾರ ಮಧ್ಯಾಹ್ನ ಹೊರಟು ಆ ರಾತ್ರಿ ಅಲ್ಲಿಯೇ ಇದ್ದು, ಭಾನುವಾರ ಸಾಯಂಕಾಲ ವಾಪಸ್ಸು ಬರುವುದು ಇಂತಹ ಸಂದರ್ಭಗಳಲ್ಲಿ ಇಳಿದುಕೊಳ್ಳುವುದಕ್ಕೆ ಸರಿಯಾದ ಜಾಗಗಳು—ದೇವಸ್ಥಾನಗಳೋ, ಮಂಟಪಗಳೋ ಇರುವುದನ್ನೂ ಇಲ್ಲದಿರುವುದನ್ನೂ ಮುಂದಾಗಿ ತಿಳಿದುಕೊಂಡಿರಬೇಕು. ಸ್ವಚ್ಛವಾದ ನೀರೂ, ದಿಣ್ಣೆಯ ನೆಲವೂ ಇರುವ ಪ್ರದೇಶಗಳಲ್ಲಿ ತಂಗುವುದು ಒಳ್ಳೆಯದು. ಈ ಪ್ರವಾಸದಲ್ಲಿ ಅಡಿಗೆಗೆ ಬೇಕಾದ ಏರ್ಪಾಡುಗಳನ್ನು ಮಾಡಿಕೊಳ್ಳಬೇಕಾಗುತ್ತದೆ.

೩. ಒಂದೇ ಕಡೆಯಲ್ಲಿ ಕೆಲವು ದಿನಗಳು ಇರುವುದು

ಈ ಬಗೆಯ ವಾಸಗಳಿಂದ ಹೆಚ್ಚು ಪ್ರಯೋಜನವುಂಟು. ಆದರೆ ಇದು ಒಂದು ವಾರಕ್ಕಿಂತ ಹೆಚ್ಚು ಕಾಲವಾಗಬಾರದು.

ಮರಿಗಳ ಶಿಬಿರವು ಕೆಟ್ಟ ಅಥವಾ ತಿಳಿಯದ ಏರ್ಪಾಡುಗಳಿಂದ ಕೆಟ್ಟುಹೋಗಲು ಸಾಕು. ಆದುದರಿಂದ ನೀವು ಬಹಳ ಎಚ್ಚರಿಕೆಯಿಂದ ಇರಬೇಕು.

(ಅ) ಮರಿಗಳಲ್ಲಿ ಕೆಲವನ್ನು ಒಂದಾವರ್ತಿಯಂತೆ 'ಒಂದು ರಾತ್ರಿ ಶಿಬಿರ' ಗಳಿಗೆ ಕರೆದುಕೊಂಡು ಹೋಗಬೇಕು.

(ಆ) ಅವರಿಗೆ ನೀವೇ ಅಡಿಗೆಮಾಡಿ ಇಕ್ಕಬೇಕು.

(ಇ) ಆಟಗಳೇ ಹೆಚ್ಚಾಗಿರುವ ಒಂದು ಕಾರ್ಯಕ್ರಮವನ್ನು ಇಟ್ಟುಕೊಂಡಿರಬೇಕು.

(ಅ) ರಜಾದಿನಗಳಲ್ಲಿ ಒಂದು ಒಳ್ಳೆಯ ವಾರವನ್ನು ಚುನಾಯಿಸಿ, ಮೊದಲೇ ಒಂದು ಸ್ಥಳವನ್ನು ನೋಡಿಕೊಂಡಿದ್ದು, ಆರು ಅಥವಾ ಇನ್ನೂ ಕಮ್ಮಿ ಮರಿಗಳನ್ನು ಕರೆದುಕೊಂಡುಹೋಗಿ, ಶಿಬಿರವನ್ನು ಏರ್ಪಡಿಸಿ, ಅಡಿಗೆಯನ್ನು ಮಾಡಿ, ನಿದ್ದೆಮಾಡಿ, ಮಾರನೆಯ ದಿನ ಹಿಂತಿರುಗಬೇಕು. ನೀವು ಮಾಡುವುದನ್ನೆಲ್ಲಾ ಮರಿಗಳಿಗೆ ಕಾಣುವ ಹಾಗೆ ಮಾಡಬೇಕು. ಮತ್ತು ಅವರಿಗೆ ವಿವರವಾಗಿ ಹೇಳಬೇಕು. ಪ್ರತಿಯೊಬ್ಬನನ್ನೂ ಪ್ರತ್ಯೇಕವಾದ ಹಾಸಿಗೆಗಳಲ್ಲಿ ಮಲಗಿಸಬೇಕು. ಪ್ರತಿಯೊಬ್ಬನಿಗೂ ದಿಂಬು ಇದೆಯೇ ಮತ್ತು ಅವನು ಬೆಚ್ಚಗೆ ಕಂಬಳಿಯನ್ನು ಹೊದ್ದುಗೊಂಡಿದ್ದಾನೆಯೇ ಎಂಬುದನ್ನು ನಿಗಾ ಇಟ್ಟಿರ

ಬೇಕು. (ಬೆನ್ನಿನ ಚೀಲಕ್ಕೆ ಹಸರು ಎಲೆಗಳನ್ನು ತುಂಬಿದರೆ ಒಂದು ತಲೆದಿಂಬಾಗುತ್ತದೆ.) ಮರಿಗಳು ಶಿಬಿರಗಳಲ್ಲಿ ಸ್ಕೌಟುಗಳಿಂತ ಚೆನ್ನಾಗಿ ನಿದ್ರೆಮಾಡುತ್ತಾರೆ.

ಎರಡನೆಯ ಶಿಬಿರದಲ್ಲಿ ಮರಿಗಳ ಕೈಗಳಿಂದ ಸ್ವಲ್ಪ ಸ್ವಲ್ಪ ಕೆಲಸಗಳನ್ನು ಮಾಡಿಸ-ಬೇಕು. ಕಡ್ಡಿಗಳನ್ನು ಜೋಡಿಸುವುದು, ಬೆಂಕಿಯನ್ನು ಹತ್ತಿಸುವುದು, ಒಲೆಯನ್ನು ಹೂಡುವುದು ಇವುಗಳನ್ನು ತೋರಿಸಿಕೊಟ್ಟು ಮಾಡಿಸಬೇಕು.

(ಅ) ಬೇಸಿಗೆಯ ಶಿಬಿರಗಳಲ್ಲಿ ಕೆಲವು ಸ್ಕೌಟುಗಳ ಸಹಾಯವು ಅವಶ್ಯ. ಸ್ಕೌಟು-ಗಳನ್ನು ಅಡಿಗೆಗೆ ಬಿಟ್ಟು, ಅವರಿಗೆ ಸಹಾಯಮಾಡಲು ಕೆಲವು ಮರಿಗಳನ್ನು ಬಿಡಬೇಕು ಮರಿಗಳು ಕಾಫಿ ಅಥವಾ ಟಿ ಗೆ ನೀರನ್ನು ಕಾಯಿಸುವುದು ; ತಮ್ಮ ಪಾತ್ರೆಗಳನ್ನೂ ಮತ್ತು ಅಡಿಗೆಯ ಪಾತ್ರೆಗಳನ್ನೂ ತೊಳೆಯುವುದು ; ಇಂತಹ ಕೆಲಸಗಳನ್ನು ಮಾಡಬಹುದು. ಶುಚಿತ್ವ ಮತ್ತು ನೀತಿಯನ್ನು ನಿರ್ಬಂಧಪಡಿಸಬೇಕು. ಪ್ರಾರಂಭದಿಂದಲೂ ಒಳ್ಳೆಯ ಶಿಬಿರದ ನಡತೆ-ಗಳನ್ನು ಅವರಲ್ಲಿ ಉಂಟುಮಾಡಬೇಕು. ಏಕೆಂದರೆ ಅವರು ಸ್ಕೌಟುಗಳಾದ ಮೇಲೂ ಅವರಿಗೆ ಈ ನಡತೆಗಳೇ ಬಂದುಬಿಡುತ್ತವೆ.

(ಇ) ಉಳಿದ ಕಾಲಗಳಲ್ಲಿ ಹೆಚ್ಚು ಓಡಾಟವಿರಬೇಕು. ತರಹೇವಾರಿಯ ಆಟಗಳಿಂದಲೇ ಶಿಬಿರಗಳು ಮುಂದಕ್ಕೆ ಬರಬೇಕಾದರೆ.

ಮರಿಗಳಲ್ಲಿ ಬೆಂಕಿಯನ್ನು ಹೊತ್ತಿಸುವ ಪಂಥ್ಯವನ್ನು ಏರ್ಪಡಿಸಬಹುದು.

ಬಹಳ ಚಿಕ್ಕವಯಸ್ಸಿನ ಮತ್ತು ಮುದ್ದಾಗಿ ಸಾಕಿದ ಮರಿಗಳು ಸ್ವಲ್ಪ 'ಗೃಹರೋಗಿ' ಗಳಾಗಬಹುದು. ಅಂಥಾ ಮರಿಗಳ ವಿಷಯದಲ್ಲಿ ನೀವು ಬಹಳ ಎಚ್ಚರಿಕೆಯಿಂದಿರಬೇಕು.

ಶಿಬಿರಗಳು ಗುಂಪಿನ ಅಂತಸ್ಥನ್ನು ಏರಿಸುತ್ತವೆ.

## ಆಟಗಳನ್ನು ಆಡಿಸುವುದು

"ಮಕ್ಕಳಿಗೆ ಆಟವೇ ದೊಡ್ಡ ವಿದ್ಯಾಭ್ಯಾಸ"—ಬೇಡನ್ ಪವೆಲ್.

ಅನೇಕ ಹಿರಿಯಣ್ಣಂದಿರು ಕಾಲಕಾಲಕ್ಕೆ ಸರಿಯಾದ ರೀತಿಯಲ್ಲಿ ಹೊಸ ಹೊಸ ಆಟಗಳನ್ನು ಆಡಿಸುವುದೇ ಒಂದು ವಿದ್ಯೆ ಎಂಬುದನ್ನು ತಿಳಿದುಕೊಂಡಿಲ್ಲ. ಕಬ್ ಶಿಕ್ಷಣವು ಆಟಗಳಲ್ಲೇ ನಡೆಯಬೇಕೆಂಬುದನ್ನು ನೀವು ಮರೆಯಬಾರದು. ಈ ಪುಸ್ತಕದಲ್ಲಿ ಸಾಧ್ಯವಾದಷ್ಟು ಆಟಗಳನ್ನು ಇದ್ದಷ್ಟು ಜಾಗದಲ್ಲಿ ಕೊಟ್ಟಿದೆ. ಈ ಆಟಗಳಲ್ಲಿ ಅನೇಕವು ಯಾರಿಗೂ ಹೊಸದಲ್ಲ. ಆಟಗಳ ವರ್ಣನೆಗಳನ್ನು ಸ್ಥಳ ಸಂಕೋಚದಿಂದ ಬಹಳ ಕತ್ತರಿ

ಸಿದೆ. ಆದರೂ ನೀವು ಈ ಆಟಗಳನ್ನು ಆಡಿಸುವಾಗ, ಇಲ್ಲಿ ಕೊಟ್ಟಿರುವ ಅಸ್ಥಿಪಂಜರವನ್ನು ಮಾಂಸ ಮತ್ತು ಚರ್ಮಗಳಿಂದ ಅಂದಗೊಳಿಸಿ, ಹುಡುಗರು ಅಸಹ್ಯದಿಂದ ದೂರಮಾಡದಂತೆ ನೋಡಿಕೊಳ್ಳಬೇಕು. ಆಟಗಳನ್ನು ಆಡಿಸುವಾಗ ಸ್ಥಳೀಯ ನಡುವಳಿಕೆಗಳೂ ಮುಖ್ಯ. ಆದುದರಿಂದ ನೀವು ನಿಮ್ಮ ನಿಮ್ಮ ಸ್ಥಳಗಳಲ್ಲಿ ಅನುಕೂಲವಾಗಬಹುದಾದ ಆಟಗಳನ್ನೇ ಆಡಿಸಬೇಕು; ಅಲ್ಲದೆ ಈ ಆಟಗಳಲ್ಲಿ ನಿಮಗೆ ಸೂಕ್ತವಾಗಿ ತೋರಿಬರುವ ಬದಲಾವಣೆಗಳನ್ನು ಮಾಡಿಕೊಳ್ಳಬಹುದು.

ಆಟಗಳನ್ನು ಸರಿಯಾದ ರೀತಿಯಲ್ಲಿ ಆಡಿಸಬೇಕು. ಸರಿಯಾದ ಆಟಗಳು ಹುಡುಗರಲ್ಲಿ ಲವಲವಿಕೆಯನ್ನೂ, ಒಳ್ಳೆಯ ಸ್ವಭಾವವನ್ನೂ, ದೇಹಾರೋಗ್ಯವನ್ನೂ ಉಂಟುಮಾಡುತ್ತವೆ.

ಆಟವು ಪ್ರಾರಂಭವಾಗುವುದಕ್ಕೆ ಮೊದಲು, ಪ್ರತಿಯೊಬ್ಬ ಆಟಗಾರನಿಗೂ, ಆಟವು ಚೆನ್ನಾಗಿ ಗೊತ್ತಾಗಿದೆಯೋ ಇಲ್ಲವೋ ಎಂಬುದನ್ನು ನೋಡಬೇಕು.

ಆಟಗಳು ಒಂದು ಸರಿಯಾದ ರೀತಿಯಲ್ಲಿ 'ಹುಷಾರ್' ಆಜ್ಞೆಯಿಂದ ಶುರುವಾಗಿ 'ಆರಾಮ್' ನಿಂದ ಮುಗಿಯಬೇಕು. ನಾಯಕ ಮತ್ತು ಗುಂಪಿನ ಇತರ ಅಧಿಕಾರಿಗಳು ಆಟದಲ್ಲಿ ಸೇರದಿದ್ದಲ್ಲಿ, ಅವರನ್ನು ಇತರರು ಸರಿಯಾಗಿ ಆಡುತ್ತಾರೆಯೋ ಇಲ್ಲವೋ ಎಂಬುದನ್ನು ನೋಡಿಕೊಳ್ಳುವುದಕ್ಕೂ, ತಪ್ಪು ಮಾಡಿದವರನ್ನು ತಿದ್ದುವುದಕ್ಕೂ ಏರ್ಪಡಿಸಬೇಕು. ಅಂದರೆ ಗುಂಪಿನ ಯಾರೊಬ್ಬರೂ ಸೋಮಾರಿಗಳಂತೆ ಸುಮ್ಮನೆ ಕೂತಿರಕೂಡದು ಎಂಬುವುದೇ ಮುಖ್ಯ ಉದ್ದಿಶ್ಯ.

ನೀವು ಪದೇ ಪದೇ ಆಟವಾಡಿಸುವ ಅಧಿಕಾರವನ್ನು ನಿಮ್ಮ ಸಹಾಯಕನಿಗೋ ಅಥವಾ ಒಬ್ಬ ನಾಯಕನಿಗೋ ಬಿಟ್ಟು, ನೀವು ಆಟವಾಡುವವರ ವಿಷಯದಲ್ಲಿ ಹೆಚ್ಚು ನಿಗಾ ಕೊಡುವುದು ಒಳ್ಳೆಯದು.

ಸಾಧ್ಯವಾದ ಮಟ್ಟಿಗೂ ತರಹೇವಾರಿ ಆಟಗಳನ್ನು ಆಡಿಸಬೇಕು; ಮತ್ತು ಆಡಿಸಬೇಕಾದ ಆಟಗಳನ್ನು ಮೊದಲೇ ಗುರ್ತು ಹಾಕಿಕೊಂಡು ಬಂದಿರಬೇಕು.

## ಕಾಡು ಕುಣಿತಗಳು

ಕುಣಿಯುವುದೆಂದರೆ ಹುಡುಗರಿಗೆ ಬಹಳ ಇಷ್ಟ. ಸೈನ್ಯದಲ್ಲಿ ಕವಾತ್ ಮಾಡಿಸುವ ಹಾಗೆ ನಾಯಕನು ಆಜ್ಞೆಗಳನ್ನು ಮಾಡುವುದೂ, ದಳವೆಲ್ಲಾ ಅದರಂತೆ ನಡೆಯುವುದೂ, ಹುಡುಗರಿಗೆ ಸರಿಹೋಗುವುದಿಲ್ಲ. ಅಲ್ಲದೆ ಉತ್ಸವ ಕಾಲಗಳಲ್ಲಿ ನೋಡಲು ಬಂದವರಿಗೂ ಅದರಿಂದ ಯಾವ ಸಂತೋಷವೂ ಆಗುವುದಿಲ್ಲ. 'ಗುಂಪ್, ಗುಂಪ್,

ಗುಂಪ್' ಎಂದು ಕೂಗಿ ಕರೆಯುವುದೂ, ಗುಂಪಿನವರು ತಾವು ಅವಿತುಕೊಂಡಿದ್ದ ಕಡೆಗಳಿಂದ ' ಗೂ ೂ ೂ ಂ ಪ್ ್ ್ ' ಎಂದು ಕಿರಿಚಿಕೊಂಡು ಸಿಕ್ಕಿದ ಹಾಗೆ ಓಡಿ ಬರುವುದೂ ಎಷ್ಟೋ ಚೆನ್ನಾಗಿರುತ್ತದೆ.

ಮರಿಗಳನ್ನು ಕುಣಿತಗಳಿಗೆ ಸಿದ್ಧಪಡಿಸುವಾಗ ಶ್ರಮವನ್ನು ತೆಗೆದುಕೊಳ್ಳಬೇಕಾಗಿಲ್ಲ. ಅಲ್ಲದೆ ಅವರ ಉತ್ಸಾಹಕ್ಕೆ ಭಂಗ ಬರುವ ರೀತಿಯಲ್ಲಿ ಅವರನ್ನು ತಿದ್ದುವುದಕ್ಕೆ ಹೋಗುವುದೂ ಸರಿಯಲ್ಲ. ಅಂದರೆ ಅವರನ್ನು ಸ್ವೇಚ್ಛೆಯಾಗಿ ಬಿಟ್ಟುಬಿಡಬೇಕೆಂದಲ್ಲ. ಅವರು ಹೇಗೆ ಮಾಡಿದರೆ ಗುಂಪಿಗೆ ಒಳ್ಳೆಯ ಹೆಸರು ಬರುತ್ತದೆ ಎಂದು ತೋರಿಸಿಕೊಟ್ಟರೆ, ಅವರು ಖಂಡಿತವಾಗಿ ಹಾಗೇ ಮಾಡುತ್ತಾರೆ.

ಕುಣಿತಗಳಿಂದ ಮರಿಗಳ ಸಹಜವಾದ ನಾಚಿಕೆಯು ದೂರವಾಗುತ್ತದೆ.

## ಕಥೆ ಹೇಳುವುದು

ಅನೇಕ ಹಿರಿಯಣ್ಣಂದಿರು ''ಅಯ್ಯೋ ನನಗೆ ಕಥೆಯನ್ನು ಹೇಳುವುದಕ್ಕೆ ಬರುವುದೇ ಇಲ್ಲ'' ಅಂತ ಹೇಳುತ್ತಾರೆ. ನಿಜ, ಏಕೆಂದರೆ ಅವರು ಒಂದು ಸಾರ್ತಿಯೂ ಹೇಳಿ ನೋಡಿಲ್ಲ. ಕೆಲವರು '' ಕಥೆಯನ್ನು ಹೇಳುವ ಸಾಮರ್ಥ್ಯವು ಸುಮ್ಮನೆ ಎಲ್ಲರಿಗೂ ಬರುವುದಿಲ್ಲ ; ಅದನ್ನೂ ಪಡೆದುಕೊಂಡು ಬರಬೇಕು '' ಎಂದು ನಂಬುತ್ತಾರೆ. ಇವೆಲ್ಲಾ ತಪ್ಪು ಅಭಿಪ್ರಾಯಗಳೆಂದು ನಮ್ಮ ಭಾವನೆ. ನಿಮಗೆ ಮಾತನಾಡುವುದಕ್ಕೆ ಬಂದರೆ ನೀವು ಕಥೆಯನ್ನು ಹೇಳಬಲ್ಲಿರಿ! ಆದರೆ ಸ್ವಾರಸ್ಯವಾಗಿಯೂ, ಹಾಸ್ಯರಸ ಪ್ರಧಾನವಾಗಿಯೂ ಹೇಳುವ ವಿಧಾನವನ್ನು ಯಾರಾದರೂ ಸುಲಭವಾಗಿ ಕಲಿತುಕೊಳ್ಳಬಹುದು.

ಅನೇಕ ಜನರು ಹಾಡಬಲ್ಲರು, ಹಾರ್ಮೋನಿಯಂ ಅನ್ನು ಕುಯಗುಟ್ಟಿಸಬಲ್ಲರು, ವೀಣೆಯನ್ನು ಮೀಟಬಲ್ಲರು, ತಬಲವನ್ನು ಹೊಡೆಯಬಲ್ಲರು, ಆದರೆ ಈ ವಿದ್ಯೆಗಳನ್ನು ಕಲಿತವರಿಂದ ಸ್ವಲ್ಪ ಹೇಳಿಸಿಕೊಂಡರೆ ಅವರ ಶಕ್ತಿಯನ್ನು ವಿಶೇಷವಾಗಿ ಅಭಿವೃದ್ಧಿಗೊಳಿಸಿಕೊಳ್ಳಬಹುದು. ಕಥೆಯನ್ನು ಹೇಳುವುದರಲ್ಲಿಯೂ ಹಾಗೆಯೇ !

ಯೋಗ್ಯವಾದ ಕಥೆಗಳನ್ನು ಸರಿಯಾದ ರೀತಿಯಲ್ಲಿ ಮರಿಗಳಿಗೆ ಹೇಳುವದರಿಂದ ಅವರಿಗಾಗುವ ಪ್ರಯೋಜನವು ಅಗಾಧವಾದುದು. ಹೇಗೆಂದರೆ ಅವರ ಮನಸ್ಸಿಗೆ ಅಸಾಧ್ಯವಾದ ಕಾರ್ಯವು ಯಾವುದೂ ಇರುವುದಿಲ್ಲ. ರವಿ ಕಾಣದ್ದನ್ನು ಕವಿ ಕಂಡರೆ, ರವಿ ಕವಿಗಳಾರೂ ಕಾಣದ್ದನ್ನೆಲ್ಲಾ ಹುಡುಗನು ಕಾಣಬಲ್ಲ. ಆದುದರಿಂದಲೇ ಎಂತಹ ಕಥೆಯ

ಆದರೆ ಕೆಲವು ಕಥೆಗಳಿವೆ. ಅವುಗಳನ್ನು ನಿಜವಾಗಿಯೂ ಓದಿದರೇ ಚೆನ್ನ : ವರ್ಣನೆಗಳು, ಚಿತ್ರಕಥೆಗಳು ಇತ್ಯಾದಿ. ಇಂಥಾ ಸಂದರ್ಭಗಳಲ್ಲಿ ಓದುವಾಗ ನಿಧಾನವಾಗಿಯೂ, ಹುಡುಗರ ಮನಸ್ಸಿಗೆ ನಾಟುವಂತೆಯೂ ಅಲ್ಲಲ್ಲಿ ನಿಲ್ಲಿಸಿ ನಿಲ್ಲಿಸಿ ಓದಬೇಕು.

**ಕಥೆಗಳು ಎಲ್ಲಿವೆ ?**

ಕಥೆಗಳನ್ನು ಹೇಗೆ ಹೇಳಬೇಕೆಂದು ಹೇಳಿದ್ದಾಯಿತು. ಇನ್ನು 'ಕಥೆಗಳು ಎಲ್ಲಿವೆ ?' ಎಂದು ನೀವು ಕೇಳಬಹುದು. ಕಥೆಗಳಿಗೇನು ಬೇಕಾದಷ್ಟಿವೆ. ರಾಮಾಯಣ, ಮಹಾಭಾರತ ಮತ್ತು ಭಾಗವತದ ಕಥೆಗಳಂತೂ ಒಂದು ದೊಡ್ಡ ಸಮಾರಾಧನೆ ; ಮತ್ತು ಕೆಲವು ಮಕ್ಕಳ ಮಾಸಪತ್ರಿಕೆಗಳಲ್ಲಿ ಅನುಕೂಲವಾದ ಕಥೆಗಳು ಆಗಾಗ ಬರುತ್ತವೆ. ಈಚೆಗೆ ಹುಡುಗರಿಗೆ ಯೋಗ್ಯವಾದ ಕೆಲವು ಕಥೆಪುಸ್ತಕಗಳೂ ಹೊರಬಿದ್ದಿವೆ. ಇವುಗಳಿಂದಲೆಲ್ಲಾ ಪ್ರಯೋಜನವನ್ನು ಹೊಂದಬಹುದು.

## ಹಾಡುಗಳನ್ನು ಹೇಳಿಸುವುದು

ಮರಿಗಳಿಗೆಲ್ಲಾ ಗಾನವಿದ್ಯೆಯಲ್ಲಿ ತುಂಬಾ ಇಷ್ಟ. ಅಂದರೆ ಸುಮ್ಮನೆ ಮನಸ್ಸು ಬಂದಂತೆ ರಾಗವನ್ನು ಎಳೆಯುವುದರಲ್ಲಿಯಲ್ಲ—ನಿಜವಾದ ಸಂಗೀತದಲ್ಲಿಯೂ. ಅದನ್ನು ಕಲಿಯುವುದು ಸಾಧ್ಯವೆಂದು ಅವರಿಗೆ ಗೊತ್ತಾದರೆ ಮತ್ತು ಹೇಳಿಕೊಡುವವರು ಯಾರಾದರೂ ಸಿಕ್ಕಿದರೆ, ಅವರು ನಿಜವಾಗಿಯೂ ಆಶೆಯಿಂದ ಸಂಗೀತವನ್ನು ಕಲಿಯುತ್ತಾರೆ. ಆದುದರಿಂದ ನೀವೇ ಸಂಗೀತಗಾರರಾಗಿದ್ದರೆ, ಇಲ್ಲವೆ ನಿಮ್ಮ ಊರಿನಲ್ಲಿ ಯಾರಾದರೂ ಸಂಗೀತಗಾರರಿದ್ದರೆ ಅವರನ್ನು ಪುರಸತ್ತಾದಾಗ ಸ್ವಲ್ಪ ಬಂದು ಮರಿಗಳಿಗೆ ಹೇಳಿಕೊಡುವಂತೆ ಕೇಳಿಕೊಂಡರೆ ಅವರು ತಿರಸ್ಕರಿಸಲಾರರು. ಸಂಗೀತವು ಮಾನವನ ಸೌಶೀಲ್ಯಾದಿ ಗುಣಗಳ ಬೆಳವಣಿಗೆಗೂ ಸಹಕಾರಿಯಾಗಿದೆ. ಆದುದರಿಂದಲೇ ಗುಂಪಿನಲ್ಲಿ ಅದಕ್ಕೆ ಒಂದು ಉಚ್ಚಸ್ಥಾನವಿರಬೇಕು.





ಶ್ರೀ ಜಯಚಾಮರಾಜ ಒಡೆಯರೂ ಅವರ ಸಹೋದರಿಯರೂ (ವಿಜಯ, ಸುಜಯ ಮತ್ತು ಶ್ರೀಜಯ)
ಮರಿಗಳ ಆಟವನ್ನು ನೋಡುತ್ತಿರುವುದು.

# ಘೂ ಜ ರ್ಣ ನೆ

ಆಟವು ಮಗುವಿನ ಆಜನ್ಮಸಿದ್ಧವಾದ ಹಕ್ಕು. ಹೊರಗಾಳಿಯಲ್ಲಿ, ಬಯಲಿನಲ್ಲಿ ತನ್ನ ಶಕ್ತ್ಯಗನುಸಾರವಾಗಿ ಓಡಿ, ಕುಣಿದು ಕುಪ್ಪಳಿಸುವ ಸ್ವಾತಂತ್ರ್ಯವು ಮಗುವಿಗುಂಟು. ಮಗುವಿನ ಪ್ರಪಂಚವೇ ಆಟದ ಪ್ರಪಂಚವು.

ಮನುಷ್ಯನ ಲಾಭ ನಷ್ಟಗಳಿಗೂ, ಸೋಲು ಗೆಲುವುಗಳಿಗೂ ಅವನ ಗುಣಗಳೇ ಕಾರಣವು. ಸದ್ಗುಣಗಳ ಅಂಕುರವು ಮಗುವಿನ ಮನಸ್ಸಿನಲ್ಲಿ ಸಣ್ಣ ವಯಸ್ಸಿನಲ್ಲಿಯೇ ಆಗಬೇಕು. ಇಂತಹ ಗುಣಗಳನ್ನು ಹಿತಕರಗಳಾದ ಸೂಚನೆಗಳಿಂದ ಆಟದ ಮೈದಾನದಲ್ಲಿ ಬೆಳೆಯಿಸಬೇಕು.

ಪ್ರತಿಯೊಂದು ಮಗುವಿನಲ್ಲಿಯೂ ಸ್ವಭಾವಸಿದ್ಧವಾದ ಕೆಲವು ಶಕ್ತಿಗಳುಂಟು. ಅವುಗಳನ್ನು ನಮ್ಮ ಪ್ರಯತ್ನಗಳಿಂದ ಅಭಿವೃದ್ಧಿಗೊಳಿಸಬೇಕು. ಆರೋಗ್ಯವಾದ ದೇಹ, ಸೂಕ್ಷ್ಮವಾದ ಬುದ್ಧಿ, ದಯಾಯುಕ್ತವಾದ ಮನಸ್ಸು, ಹಿರಿಯರಲ್ಲಿಯೂ ತಮ್ಮ ಒಡನಾಡಿಗಳಲ್ಲಿಯೂ ಇರುವ ನಿಶ್ಚಲವಾದ ಭಕ್ತಿ ವಿಶ್ವಾಸಗಳು ಇವುಗಳನ್ನು ಸರಿಯಾದ ಆಟಗಳಿಂದ ಕಲಿಸಬಹುದೆಂದು ಅನೇಕರ ಅನುಭವಸಿದ್ಧವಾಗಿದೆ.

ಆಟಗಳಲ್ಲಿ ಅನೇಕ ವಿಧಗಳುಂಟು. ಹೆಚ್ಚಾದ ಓಡಾಟದಿಂದ ಶಾರೀರಕ ಪರಿಶ್ರಮವನ್ನೂ ಸಾಹಸವನ್ನೂ ಹೊರಬೀಳಿಸತಕ್ಕುವು ಕೆಲವು. ಸಂಘಕ್ಕಾಗಿ ಐಕಮತ್ಯದಿಂದ ತಮ್ಮ ಸರ್ವ ಶಕ್ತಿಯನ್ನೂ ಉಪಯೋಗಿಸುವ ಗುಣವನ್ನು ಬೆಳೆಯಿಸುವುವು ಕೆಲವು. ಮತ್ತೆ ಕೆಲವು ಜ್ಞಾಪಕಶಕ್ತಿ, ವಿತರಣೆ, ಸೂಕ್ಷ್ಮದೃಷ್ಟಿ, ಶ್ರವಣ ಮತ್ತು ಸ್ಪರ್ಶೇಂದ್ರಿಯಗಳ ಶಕ್ತಿ ಇವುಗಳನ್ನು ಅಭಿವೃದ್ಧಿಗೊಳಿಸತಕ್ಕುವು. ಕೆಲವು ಆಟಗಳು ಒಳಗೂ, ಕೆಲವು ಮೈದಾನಗಳ ಹೊರಗಾಳಿಯಲ್ಲಿಯೂ ಮತ್ತೆ ಕೆಲವು ವಿಶಾಲವಾದ ಬೆಟ್ಟ, ಗುಡ್ಡ, ಕಣಿವೆಯ ಪ್ರದೇಶಗಳಲ್ಲಿಯೂ ಆಡಲು ಯೋಗ್ಯವಾದುವು.

ಈ ಆಟಗಳಲ್ಲಿ ಕೆಲವನ್ನು ಪ್ರತಿಸಲವೂ ವಿಚಕ್ಷಣೆಯಿಂದ ಚುನಾಯಿಸಿ ಆಡಿಸುವುದರಿಂದ ನಮ್ಮ ಉದ್ದೇಶವನ್ನು ನೆರವೇರಿಸಲು ಸಾಧ್ಯವುಂಟು. ನಡತೆಯ ತಿದ್ದುಪಡಿ, ಸಾಹಸ ಕಾರ್ಯಸಾಧನೆ, ಪರಸ್ಪರ ಸೌಹಾರ್ದ, ಸಂತೋಷಚಿತ್ತತೆ, ವಿಜಯದಿಂದ ಉಬ್ಬದ, ಸೋಲಿನಿಂದ ಕುಗ್ಗದ ಶಾಂತಚಿತ್ತತೆ, ಕಾರ್ಯದಕ್ಷತೆ ಈ ಗುಣಗಳನ್ನು ಒಂದು ಘಂಟೆ ಕಾಲದ ಆಟದಲ್ಲಿ ಕಲಿಸಬಹುದಾದಷ್ಟು ಹತ್ತು ಘಂಟೆ ಕಾಲದ ತರಗತಿಯ ಪಾಠಗಳಿಂದಲೂ ಕಲಿಸಲು ಆಗಲಾರದೆಂದು ಧೈರ್ಯವಾಗಿ ಒತ್ತಿ ಒತ್ತಿ ಹೇಳಬಹುದು. ಪ್ರತಿಯೊಂದು ಆಟಕ್ಕೂ ಕೆಲವು ನಿಷ್ಕೃಷ್ಟಗಳಾದ ನಿಯಮಗಳುಂಟು. ಕಟ್ಟಳೆಗೆ ಒಳಪಟ್ಟು ಆಡುವುದರಿಂದ ತಮ್ಮ ಸ್ವಂತ ಕಷ್ಟವನ್ನು ಗುಂಪಿನ ಜಯದಲ್ಲಿ ಮರೆತು ದೊಡ್ಡವರಾದಮೇಲೆ ತಮಗೊದಗಬಹುದಾದ ಕಾರ್ಯಗಳಲ್ಲಿಯೂ ಶಾಂತಚಿತ್ತತೆಯಿಂದ ವರ್ತಿಸುವಂತಹ ಸುಶಿಕ್ಷಿತರಾಗುವರು. ನಮ್ಮ ಬಾಲಕರು ಹೀಗಾಗಬೇಕೆಂಬುದೇ "ಕಬ್" ಅಂದರೆ ಮರಿಗಳ ಶಿಕ್ಷಣದ ಮುಖ್ಯ ಧ್ಯೇಯವು.

ಶಿಕ್ಷಕನು ಆಟಕ್ಕೆ ತಕ್ಕ ಸನ್ನಿವೇಶಗಳನ್ನು ಕಲ್ಪಿಸಬೇಕು. ಉಚಿತವಾದ ಸಲಕರಣೆಗಳನ್ನು ಒದಗಿಸಿಕೊಟ್ಟು, ಯಾವ ಆಟಗಳಲ್ಲಿ ಬಾಲಕರಿಗೆ ಹೆಚ್ಚು ಆಸಕ್ತಿ ಇದೆಯೆಂಬುದನ್ನು ತಿಳಿದು, ತಾನು ಹಿರಿಯಣ್ಣನಂತಿದ್ದು, ಅವರ ಮನಸ್ಸನ್ನಾಕರ್ಷಿಸಿ, ಮಾರ್ಗದರ್ಶಕನಾಗಿ ಸನ್ಮಾರ್ಗದಲ್ಲಿ ಅವರನ್ನು ನಡೆಯಿಸಬೇಕು.

ಮರಿಗಳ ಶಿಕ್ಷಕರಿಗಾಗಿ ಈ ಪುಸ್ತಕದಲ್ಲಿ ಕೆಲವು ಆಟಗಳನ್ನು ಕೊಟ್ಟಿದೆ. ಇವು ತಳಹದಿಯೆಂದು ತಿಳಿದು ಶಿಕ್ಷಕನು ತನ್ನ ಸ್ವಂತ ವ್ಯಾಸಂಗದಿಂದಲೂ, ಬುದ್ಧಿಶಕ್ತಿಯಿಂದಲೂ, ಈ ಆಟಗಳ ಮಾದರಿಯನ್ನನುಸರಿಸಿ ಇದರಮೇಲೆ ತನ್ನ ಉದ್ದೇಶಕ್ಕೆ ತಕ್ಕ ಕಟ್ಟಡವನ್ನು ಕಟ್ಟಿಕೊಳ್ಳಬಹುದು. ಆಟಗಳಿಗೆ ಜೀವಕಳೆಯನ್ನು ತುಂಬಲು ಹುಡುಗರಿಗೆ ಪೂರ್ಣ ಸ್ವಾತಂತ್ರ್ಯವನ್ನು ಕೊಟ್ಟು, ಪ್ರತಿಯೊಬ್ಬರ ವ್ಯಕ್ತಿತ್ವವನ್ನೂ ಹೊರಬೀಳಿಸಿ ಈ ಕಾರ್ಯ

ವನ್ನು ನೆರವೇರಿಸಬೇಕು. ಈ ಧ್ಯೇಯವನ್ನು ಕಾರ್ಯಕಾರಿಯಾಗುವಂತೆ ಮಾಡಲು ಈ ಪುಸ್ತಕದಿಂದ ಏನಾದರೂ ಸಹಾಯ ದೊರೆತರೆ ಇದರ ಉದ್ದೇಶವು ಸಾರ್ಥಕವಾದಂತಾಯಿತು.

ಸಾಧಾರಣವಾಗಿ ನಿರ್ಬಂಧದಲ್ಲಿ ಸಿಕ್ಕಿ ಬೆಳೆಯುತ್ತಿರುವ ನಮ್ಮ ದೇಶದಮಕ್ಕಳ, ಅದರಲ್ಲಿಯೂ ಬಡ ಹುಡುಗರ ಹೃದಯದಲ್ಲಿ ಹರ್ಷ ವೆಂಬ ಸೂರ್ಯನು ಬಿಂಬಿಸುವುದು ಅಪೂರ್ವವೆಂದರೆ ಅತಿಶಯೋಕ್ತಿ ಯಾಗಲಾರದು. ಆಟವು ಮಕ್ಕಳ ಪ್ರಾಣ. ಆಟವೇ ಅವರ ಸುಖ ಸರ್ವಸ್ವವು. ತಮ್ಮ ವಿನಯದಿಂದ ಕೂಡಿದ ನಡೆನುಡಿಗಳಿಂದಲೂ, ಹಸನ್ಮುಖದಿಂದಲೂ, ಆಟಗಳಿಂದಲೂ ನಮ್ಮ ಮರಿಗಳ ಜೀವನದ ಬೆಳಗಿನಲ್ಲಿ ಮೋಘರಹಿತವಾದ ಎಳೆಬಿಸಿಲು ಬೆಳಗುವಂತೆ ಮಾಡಲು ನಮ್ಮ ಶಿಕ್ಷಕ ಸಹೋದರ ವರ್ಗಕ್ಕೆ ದೇವರು ಬುದ್ಧಿಯನ್ನೂ, ಸಹಾಯ ಸಂಪತ್ತನ್ನೂ ಒದಗಿಸಿಕೊಡುವನೆಂದು ದೃಢವಾಗಿ ನಂಬಿರುವೆನು.

---

# ಆಟ ಮತ್ತು ಕುಣಿತಗಳು

ಕುಣಿತಗಳು ಪುಟ

# ಆ ಟ ಗ ಳು

—: 0 :—

## ೧. ಹುಂಜದ ಜಗಳ

ಆಟಗಾರರಲ್ಲಿ ಇಬ್ಬಿಬ್ಬರನ್ನು (ಒಂದೊಂದು ಜೋಡಿ) ಚುನಾಯಿಸ ಬೇಕು. ಇವರು ಮುಂದಕ್ಕೆ ಬಂದು, ಕೈಗಳನ್ನು ಕಟ್ಟಿ, ಒಂದು ಕಾಲನ್ನು ಎತ್ತಿಕೊಂಡು, ಒಬ್ಬರ ತೋಳುಗಳನ್ನು ಒಬ್ಬರು ಗುದ್ದಲು ಪ್ರಾರಂಭಿಸ ಬೇಕು. ಆದರೆ ಯಾರೂ ಕೈಯನ್ನಾಗಲೀ ಕಾಲನ್ನಾಗಲೀ ಬಿಡಕೂಡದು. ಬಿಟ್ಟರೆ ಸೋತಂತೆ.

## ೨. ಕೈಕಾಲು ಓಟ

ಆಟಗಾರರಲ್ಲಿ ಇಬ್ಬಿಬ್ಬರನ್ನು (ಒಂದೊಂದು ಜೋಡಿ) ಚುನಾಯಿಸ ಬೇಕು. ಈ ಇಬ್ಬರಲ್ಲಿ ಒಬ್ಬನು ತನ್ನ ಕೈಗಳ ಮೇಲೆ ನಡೆಯಬೇಕು. ಇನ್ನೊಬ್ಬನು ಅವನ ಕಾಲುಗಳನ್ನು ಎತ್ತಿ ತನ್ನ ಕಂಕಳು ಸಂದಿನಲ್ಲಿ ಭದ್ರವಾಗಿ ಸೇರಿಸಿಕೊಂಡಿರಬೇಕು. ಹೀಗೆ ಪ್ರತಿ ಜೋಡಿಯೂ ಒಂದು ಗೊತ್ತಾದ ಸ್ಥಳಕ್ಕೆ ಹೋಗಿ ಬರಬೇಕು.

## ೩. ಏಡಿ ಓಟ

ಆಟಗಾರರಲ್ಲಿ ಇಬ್ಬಿಬ್ಬರನ್ನು (ಒಂದೊಂದು ಜೋಡಿ) ಚುನಾಯಿಸ ಬೇಕು. ಅವರಲ್ಲಿ ಒಬ್ಬನು ತನ್ನ ಕೈಗಳಿಂದ ಇನ್ನೊಬ್ಬನ ಕೈಗಳನ್ನು ಹಿಂದುಗಡೆ ಹಿಡಿದುಕೊಳ್ಳಬೇಕು. ಅವರ ಮೊಣಕಾಲುಗಳನ್ನು ಸೇರಿಸಿ ಕಟ್ಟಿರಬೇಕು. ಹೀಗೆ ಪ್ರತಿ ಜೋಡಿಯೂ ಒಂದು ಗೊತ್ತಾದ ಸ್ಥಳಕ್ಕೆ ಪಕ್ಕಗಳಲ್ಲಿಯೇ ಕುಪ್ಪಿಕೊಂಡು ಹೋಗಿ ಬರಬೇಕು.

## ೪. ಮೊಸಳೆ ಓಟ

ಆಟಗಾರರೆಲ್ಲರೂ ತಮ್ಮ ತಮ್ಮ ಪಂಗಡಗಳಲ್ಲಿ ಒಬ್ಬರ ಹಿಂದೆ ಒಬ್ಬರಂತೆ ಹಿಮ್ಮಡಿಗಳ ಮೇಲೆ ಕುಳಿತುಕೊಂಡು ತಮ್ಮ ಕೈಗಳಿಂದ ಮುಂದಿರುವವರ ಭುಜಗಳನ್ನು ಹಿಡಿದುಕೊಳ್ಳಬೇಕು. ಪ್ರತಿ ಪಂಗಡವೂ ಹೀಗೆ ಒಂದು ಗೊತ್ತಾದ ಸ್ಥಳಕ್ಕೆ ಕುಪ್ಪಿಕೊಂಡು ಹೋಗಿ ಬರಬೇಕು. ಯಾರಾದರೂ ಕೈ ಬಿಟ್ಟರೆ ಅಥವಾ ಬಿದ್ದರೆ ಹಿಂದಕ್ಕೆ ಬಂದು ಮತ್ತೆ ಹೊರಡಬೇಕು.

## ೫. ಚೌಚೌ ಓಟ

ಆಟಗಾರರೆಲ್ಲರೂ ತಮ್ಮ ತಮ್ಮ ಪಂಗಡಗಳಲ್ಲಿ ದೂರ ದೂರವಾಗಿ ನಿಲ್ಲಬೇಕು. ಶೀಟಿಯನ್ನು ಊದಿದಕೂಡಲೆ ಮೊದಲನೆಯ ಆಟಗಾರನು ಎರಡನೆಯವನ ಬಳಿಗೆ ಓಡಿಹೋಗಬೇಕು. ಇವನು ಹೋದಮೇಲೆ ಎರಡನೆಯ ಆಟಗಾರನು ಮೂರನೆಯವನ ಬಳಿಗೆ ಕುಂಟಿಕೊಂಡು ಹೋಗಬೇಕು. ಹೀಗೆ ಮೂರನೆಯವನು ಅಂಬೆಗಾಲಿಡುವುದು, ನಾಲ್ಕನೆಯವನು ಹಿಂದಕ್ಕೆ ನಡೆಯುವುದು, ಉರುಳುವುದು, ಕುಪ್ಪುವುದು, ಇತ್ಯಾದಿ.

## ೬. ಶಬ್ದ ಹಿಡಿ

ಆಟಗಾರರೆಲ್ಲರನ್ನೂ ವೃತ್ತಾಕಾರವಾಗಿ ಕೂರಿಸಿ, ನಾಯಕನು ವೃತ್ತದ ಮಧ್ಯದಲ್ಲಿ ಕೈಗಳಿಂದ ಕೆಲವು ವ್ಯಾಯಾಮಗಳನ್ನು ಮಾಡಬೇಕು. ಹೀಗೆ ಮಾಡುತ್ತಿರುವಾಗ ಆಟಗಾರರೆಲ್ಲರೂ ಚಪ್ಪಾಳೆಯನ್ನು ತಟ್ಟುತ್ತಿರಬೇಕು. ನಾಯಕನು ಯಾವಾಗ ವ್ಯಾಯಾಮವನ್ನು ನಿಲ್ಲಿಸುತ್ತಾನೆಯೋ, ತಕ್ಷಣವೇ ಚಪ್ಪಾಳೆಯನ್ನೂ ನಿಲ್ಲಿಸಬೇಕು. ನಿಲ್ಲಿಸದವರು ಹೊರಗೆ ಹೋಗಬೇಕು. ಹೀಗೆ ಒಬ್ಬನು ನಿಲ್ಲುವ ತನಕ ಆಡಬಹುದು.

## ೭. ಬೆಂಕಿಯ ಚೆಂಡು

ಆಟಗಾರರೆಲ್ಲರೂ ಒಬ್ಬರ ಕೈಯನ್ನು ಒಬ್ಬರು ಹಿಡಿದುಕೊಂಡು ವೃತ್ತಾಕಾರವಾಗಿ ನಿಲ್ಲಬೇಕು. ಮಧ್ಯದಲ್ಲಿ ಒಂದು ಕಾಲ್ಚೆಂಡು ಇರುತ್ತದೆ. ಆಗ ಎಲ್ಲರೂ ತಾವು ಅದರ ಮೇಲೆ ಕಾಲಿಡದಂತೆ ಎಚ್ಚರಿಕೆಯಿಂದಿದ್ದು ಇತರರನ್ನು ಅದರ ಮೇಲೆ ತಳ್ಳಲು ಪ್ರಯತ್ನಿಸಬೇಕು. ಈ ಎಳದಾಟದಲ್ಲಿ ಯಾರು ಆ ಚೆಂಡನ್ನು ಮುಟ್ಟುತ್ತಾರೆಯೋ ಅವರು ಹೊರಗೆ ಹೋಗಬೇಕು. ಹೀಗೆ ಒಬ್ಬೊಬ್ಬರು ಕಮ್ಮಿಯಾದ ಹಾಗೆಲ್ಲಾ ಆಟವು ತೀಕ್ಷ್ಣವಾಗುವುದು. ಕಡೆಯಲ್ಲಿ ಒಬ್ಬನು ಉಳಿಯುವ ತನಕ ಆಡಬಹುದು.

## ೮. ಕತ್ತೆಯ ಬಾಲ

ನೆಲದ ಮೇಲೆ ಮಣ್ಣು ಅಥವಾ ಮರಳಿನಲ್ಲಿ ಒಂದು ಬಾಲವಿಲ್ಲದ ಕತ್ತೆಯ ಆಕಾರವನ್ನು ಬರೆಯಬೇಕು. ಆಟಗಾರರೆಲ್ಲರೂ ಈ ಕತ್ತೆಯಿಂದ ಎಂಟು ಹೆಜ್ಜೆಗಳ ದೂರದಲ್ಲಿ ವೃತ್ತಾಕಾರವಾಗಿ ನಿಲ್ಲಬೇಕು. ಆಗ ಅವರಲ್ಲಿ ಒಬ್ಬನಿಗೆ ಕಣ್ಣುಕಟ್ಟಿ ದಿಕ್ಕು ತಿಳಿಯದಂತೆ ಅನೇಕಾವರ್ತಿ ಸುತ್ತ ತಿರುಗಿಸಿ ಬಿಡಬೇಕು. ಆಗ ಅವನು ಕತ್ತೆಯಿರುವ ಜಾಗವನ್ನು ಹುಡುಕಿಕೊಂಡು ಹೋಗಿ ಅದಕ್ಕೆ ಹೊಂದುವಂತೆ ಒಂದು ಬಾಲವನ್ನು ಬರೆಯಬೇಕು. ಬಾಕಿಯವರು ತಮಾಷೆ ನೋಡುತ್ತಿರಬೇಕು. ಕತ್ತೆಯ ಹತ್ತಿರಕ್ಕೆ ಹೋದವನೇ ಗೆದ್ದವ.

## ೯. ಮಳೆ ಹೊಡಿ

ಗುಡಾರದ ಅಥವಾ ಇನ್ನಾವುದಾದರೂ ಒಂದು ದೊಡ್ಡ ಮಳೆಯನ್ನು ನೆಲದಮೇಲೆ ಹೊಡೆಯಬೇಕು. ಆಟಗಾರರೆಲ್ಲರೂ ಈ ಮಳೆಯಿಂದ ಆರು ಹೆಜ್ಜೆಗಳ ದೂರದಲ್ಲಿ ವೃತ್ತಾಕಾರವಾಗಿ ನಿಲ್ಲಬೇಕು. ಆಗ ಅವರಲ್ಲಿ ಒಬ್ಬನಿಗೆ ಕಣ್ಣುಕಟ್ಟಿ ಒಂದು ಕೊಡತಿ ಅಥವಾ ಕಲ್ಲನ್ನು ಕೈಗೆ ಕೊಟ್ಟು

ದಿಕ್ಕು ತಿಳಿಯದಂತೆ ಅನೇಕಾವರ್ತಿ ಸುತ್ತ ತಿರುಗಿಸಿ ಬಿಡಬೇಕು. ಆಗ ಅವನು ಮಳೆಯಿರುವ ಜಾಗವನ್ನು ಹುಡುಕಿಕೊಂಡುಹೋಗಿ ಅದನ್ನು ಕೊಡತಿಯಿಂದ ಹೊಡೆಯಬೇಕು. ಬಾಕಿಯವರು ತಮಾಷೆ ನೋಡುತ್ತಿರ ಬೇಕು. ಮಳೆಯ ಹತ್ತಿರಕ್ಕೆ ಹೋದವನೇ ಗೆದ್ದವ.

## ೧೦. ನಮಸ್ಕಾರ

ಆಟಗಾರರೆಲ್ಲರೂ (ಒಬ್ಬನು ವಿನಃ) ವೃತ್ತಾಕಾರವಾಗಿ ಒಳಮುಖ ವಾಗಿ ನಿಲ್ಲಬೇಕು. ಆ ಒಬ್ಬನು ಅವರ ಸುತ್ತಲೂ ಸುತ್ತುತ್ತಾ ಓಡಬೇಕು. ಹೀಗೆ ಓಡುವಾಗ ಅವನು ಅವರಲ್ಲಿ ಯಾರನ್ನಾದರೂ ಮುಟ್ಟಬೇಕು. ಹಾಗೆ ಮುಟ್ಟಿದವನು ಇವನು ಯಾವ ಕಡೆ ಓಡುವನೋ ಅದರ ಎದುರುಗಡೆಯಲ್ಲಿ ಓಡಬೇಕು. ಇಬ್ಬರೂ ಒಂದು ಬಳಿ ಸಂಧಿಸುವರು. ಆಗ ಅವರು ಒಬ್ಬನ ಎಡಗೈ ಯನ್ನು ಇನ್ನೊಬ್ಬನು ಹಸ್ತಲಾಘವವನ್ನು ಕೊಡುವಂತೆ ಹಿಡಿದುಕೊಂಡು "ನಮಸ್ಕಾರ, ನಮಸ್ಕಾರ, ನಮಸ್ಕಾರ" ಎಂದು ಮೂರುಸಾರ್ತಿ ಹೇಳಿ ಓಡಿಹೋಗಿ ಖಾಲಿ ಇರುವ ಜಾಗದಲ್ಲಿ ನಿಂತುಕೊಳ್ಳಬೇಕು. ಜಾಗವಿಲ್ಲದ ವನು ಮೊದಲು ಹೇಳಿದಂತೆ ಸುತ್ತಲೂ ಓಡಬೇಕು.

## ೧೧. ಕುದುರೆ—ಸವಾರ

ಆಟಗಾರರನ್ನು ಎರಡು ಭಾಗವಾಗಿ ವಿಭಾಗಿಸಬೇಕು. ಈಗ ಒಂದು ಭಾಗದವರೆಲ್ಲರೂ ಕುದುರೆಗಳು ; ಇನ್ನೊಂದು ಭಾಗದವರೆಲ್ಲರೂ ಸವಾರರು. ಆ ಮೇಲೆ ಒಂದು ಗೊತ್ತಾದ ಸ್ಥಳದಲ್ಲಿ ಕುದುರೆಗಳೆಲ್ಲವೂ ಸಾಲಾಗಿ ನಿಲ್ಲ ಬೇಕು ; ಅವುಗಳ ಹಿಂದೆ ಸವಾರರು. ನಾಯಕನು ಶೀಟಿಯನ್ನು ಊದಿದ ಕೂಡಲೆ ಸವಾರರೆಲ್ಲರೂ ತಮ್ಮ ತಮ್ಮ ಕುದುರೆಗಳನ್ನೇರಿ ಇನ್ನೊಂದು ಗೊತ್ತಾದ ಸ್ಥಳಕ್ಕೆ ಓಡಬೇಕು. ಅಲ್ಲಿ ಒಬ್ಬೊಬ್ಬ ಸವಾರನಿಗೂ ಕಾಗದವನ್ನು ಕೊಡಲು ಒಬ್ಬೊಬ್ಬ ಹುಡುಗನನ್ನು ಓಡತಕ್ಕವರ ಸಾಲಿಗೆ ಸರಿಯಾಗಿ

ನಿಲ್ಲಿಸಿರಬೇಕು. ಅಲ್ಲಿ ಕುದುರೆಗಳು ಸವಾರರೂ, ಸವಾರರು ಕುದುರೆಗಳೂ ಆಗ ಬೇಕು ; ಮತ್ತು ಕೊಟ್ಟ ಕಾಗದವನ್ನು ತೆಗೆದುಕೊಂಡು ಬಂದು ತಲಪಿಸ ಬೇಕು.

## ೧೨. ಹಾವಿನ ಪರೆ

ಆಟಗಾರರೆಲ್ಲರೂ ತಮ್ಮ ತಮ್ಮ ಪಂಗಡಗಳಲ್ಲಿ ಒಬ್ಬರ ಹಿಂದೆ ಒಬ್ಬರಂತೆ ನಿಂತುಕೊಳ್ಳಬೇಕು. ನಾಯಕನು ಶೀಟಿಯನ್ನು ಊದಿದ ಕೂಡಲೆ ಪ್ರತಿಯೊಬ್ಬನೂ ತನ್ನ ಕಾಲುಗಳ ಮಧ್ಯೆ ಎಡಗೈಯನ್ನು ಹಾಕಿ, ಮುಂದಿರುವವನ ಬಲಗೈಯನ್ನು ಹಿಡಿದುಕೊಳ್ಳಬೇಕು. ಆ ಮೇಲೆ ಕೊನೆಯವನು ಮುಂದಿನವನ ಕೈಯನ್ನು ಹಿಡಿದುಕೊಂಡೇ ಅಂಗತ್ತನಾಗಿ ಮಲಗಬೇಕು. ಐದನೆಯವನು ಮಲಗಿಕೊಂಡಿರುವ ನಾಲ್ಕನೆಯವನನ್ನು ದಾಟಿದಕೂಡಲೇ ತಾನೂ ಮಲಗಿಕೊಳ್ಳಬೇಕು. ಕೊನೆಯವನು ಮಲಗಿ ತನ್ನ ತಲೆಯನ್ನು ನೆಲಕ್ಕೆ ಮುಟ್ಟಿಸಿ ಕೂಡಲೇ ಎದ್ದು ಮೊದಲು ನಿಂತಿದ್ದಂತೆ ನಿಲ್ಲಬೇಕು. ಮಲಗಿಕೊಳ್ಳುವಾಗಲೇ ಆಗಲಿ, ಎದ್ದುಬರುವಾಗಲೇ ಆಗಲಿ ಹಿಡಿದುಕೊಂಡಿರುವ ಕೈಗಳನ್ನು ಬಿಡಬಾರದು.

## ೧೩. ಕಾಲು ಚೆಂಡು

ಆಟಗಾರರೆಲ್ಲರೂ ವೃತ್ತಾಕಾರವಾಗಿ, ಕಾಲುಗಳನ್ನು ಒಂದು ಅಡಿ ಅಗಲಿಸಿ ನಿಂತುಕೊಳ್ಳಬೇಕು. ಮಧ್ಯದಲ್ಲಿ ಒಂದು ಕಾಲ್ಚೆಂಡನ್ನು ಇಡಬೇಕು. ನಾಯಕನು ಶೀಟಿಯನ್ನು ಊದಿದ ಕೂಡಲೆ ಪ್ರತಿಯೊಬ್ಬನೂ ಆ ಚೆಂಡನ್ನು ಇನ್ನೊಬ್ಬನ ಕಾಲುಗಳ ಮಧ್ಯದಲ್ಲಿ ನುಗ್ಗಿಸಲು ಪ್ರಯತ್ನಿಸಬೇಕು. ಹೀಗೆ ಮಾಡುವಾಗ ಯಾರೂ ಕಾಲುಗಳನ್ನು ಜೋಡಿಸಿಕೊಳ್ಳಕೂಡದು, ಮತ್ತು ವೃತ್ತವನ್ನು ಬಿಟ್ಟು ಹೋಗಬಾರದು. ಚೆಂಡನ್ನು ಕೈಗಳಿಂದಲೇ ತಡೆಯಬೇಕು. ಯಾರ ಕಾಲುಗಳ ಮಧ್ಯೆ ಚೆಂಡು ಹೋಗು

ತ್ತದೆಯೋ ಅವನು ಹೊರಗೆ ಬರಬೇಕು. ಹೀಗೆ ಒಬ್ಬೊಬ್ಬರು ಕಮ್ಮಿಯಾದ ಹಾಗೆಲ್ಲಾ ಆಟವು ತೀಕ್ಷ್ಣವಾಗುವುದು. ಕಡೆಯಲ್ಲಿ ಒಬ್ಬನು ಉಳಿಯುವ ತನಕ ಆಡಬಹುದು.

## ೧೪. ದೋಣಿ ಚೆಂಡು

ಆಟಗಾರರೆಲ್ಲರೂ ತಮ್ಮ ತಮ್ಮ ಪಂಗಡಗಳಲ್ಲಿ ಒಬ್ಬರ ಹಿಂದೆ ಒಬ್ಬರಂತೆ ಮೂರು ಮೂರು ಅಡಿಗಳ ಅಂತರದಲ್ಲಿ ಕಾಲುಗಳನ್ನು ಅಗಲಿಸಿ ನಿಲ್ಲಬೇಕು. ಮೊದಲನೆಯ ಆಟಗಾರನ ಕಾಲುಗಳ ಮಧ್ಯೆ ನೆಲದ ಮೇಲೆ ಒಂದು ಕಾಲ್ಚೆಂಡು ಇರಬೇಕು. ಶೀಟಿಯನ್ನು ಊದಿದ ಕೂಡಲೆ ಅವನು ಒಗ್ಗಿ ತನ್ನ ಕೈಗಳಿಂದ ಆ ಚೆಂಡನ್ನು ಎರಡನೆಯವನಿಗೆ ನೂಕಬೇಕು. ಹೀಗೆಯೇ ಅದು ಒಬ್ಬರಿಂದೊಬ್ಬರಿಗೆ ಕಡೆಯವನ ತನಕ ಹೋಗಬೇಕು. ಆಗ ಕಡೆಯವನು ಅದನ್ನು ಕೈಗಳಲ್ಲಿ ತೆಗೆದುಕೊಂಡು ಒಂದು ಪಂಗಡದ ಮುಂದೆ ನಿಂತುಕೊಂಡು ಮತ್ತೆ ಮೊದಲಿನಂತೆ ತನ್ನ ಕಾಲುಗಳ ಮಧ್ಯೆ ನೂಕಬೇಕು. ಹೀಗೆ ಆಟಗಾರರೆಲ್ಲರಿಗೂ ಸರ್ತಿ ಬಂದು ಯಾವ ಪಂಗಡವು ಮೊದಲು ಮುಗಿಸುವುದೋ ಅದೇ ಗೆದ್ದಂತೆ.

## ೧೫. ಸುರಂಗ

ಆಟಗಾರರನ್ನೆಲ್ಲಾ ಎಂಟೆಂಟು ಹುಡುಗರಿರುವ ಪಂಗಡಗಳಾಗಿ ವಿಂಗಡಿಸಬೇಕು. ಆ ಮೇಲೆ ಪ್ರತಿಪಂಗಡದವರಲ್ಲಿ ನಾಲ್ಕು ಹುಡುಗರನ್ನು ಸಾಲಾಗಿಯೂ, ಉಳಿದ ನಾಲ್ವರನ್ನು ಅವರಿಗೆ ಎದುರಾಗಿಯೂ ನಿಲ್ಲಿಸಬೇಕು. ಅಂದರೆ ಒಬ್ಬರ ಎದುರಿಗೆ ಒಬ್ಬರಂತೆ ನಾಲ್ಕು ಜೊತೆಗಳಿದ್ದಂತಾಯಿತು. ಪ್ರತಿ ಜೊತೆಯವರೂ ತಮ್ಮ ಕೈಗಳನ್ನು ಮೇಲಕ್ಕೆ ಎತ್ತಿ ಎದುರಾಳಿಯ ಕೈಗಳನ್ನು ಹಿಡಿದುಕೊಳ್ಳಬೇಕು. ಇದೇ ಸುರಂಗ. ಎಲ್ಲಾ ಸುರಂಗಗಳೂ ಒಂದೇ ಸಾಲಿನಲ್ಲಿರಬೇಕು. ನಾಯಕನು ಪ್ರತಿಯೊಂದು ಸುರಂಗದ

ಹಿಂಬಾಗಿಲಿನ ಇಬ್ಬರು ಆಟಗಾರರಿಗೂ ಎರಡು ನಾಣ್ಯಗಳನ್ನು ಕೊಟ್ಟು ಶೀಟಿಯನ್ನು ಊದುವನು. ಕೂಡಲೇ ಅವರು ತಮ್ಮಲ್ಲಿರುವ ನಾಣ್ಯವನ್ನು ತಮ್ಮ ಪಕ್ಕದವರಿಗೆ ಕೊಟ್ಟು, ಸುರಂಗದೊಳಗೆ ನುಗ್ಗಿ ಹೋಗಿ, ಆಚೆ ಮೊದಲಿನಂತೆಯೇ ಕೈಗಳನ್ನು ಹಿಡಿದು ನಿಲ್ಲಬೇಕು. ಹೀಗೆ ಎಲ್ಲರೂ ಸುರಂಗದಲ್ಲಿ ಓಡಿದನಂತರ, ಮೊದಲು ಓಡಿದವರು ನಾಣ್ಯವನ್ನು ತೆಗೆದು ಕೊಂಡು ಹೋಗಿ ನಾಯಕನಿಗೆ ಕೊಡಬೇಕು.

## ೧೬. ಅಳಿಲಿನ ಗೂಡು

ಆಟಗಾರರನ್ನೆಲ್ಲಾ (ಒಬ್ಬನು ವಿನಃ) ಐದರ ಪಂಗಡಗಳಾಗಿ ವಿಂಗಡಿಸಿ, ಈ ಪಂಗಡಗಳನ್ನು ಸಮದೂರದಲ್ಲಿ ವೃತ್ತಾಕಾರ ಅಥವಾ ಚೌಕವಾಗಿ ನಿಲ್ಲಿಸಬೇಕು. ಮಧ್ಯದಲ್ಲಿ ಒಬ್ಬನು ನಿಂತುಕೊಳ್ಳ ಬೇಕು. ಪ್ರತಿಯೊಂದು ಪಂಗಡದಲ್ಲಿಯೂ ನಾಲ್ಕು ಹುಡುಗರು ನಾಲ್ಕು ಮೂಲೆಗಳಾಗಿ ಕೈಗಳನ್ನು ಹಿಡಿದುಕೊಂಡು ಗೂಡಿನಂತೆ ನಿಂತು ಕೊಳ್ಳಬೇಕು. ಐದನೆಯವನು ಅದರೊಳಗೆ ಕುಳಿತುಕೊಳ್ಳಬೇಕು. ಇವನೇ ಅಳಿಲು. ಶೀಟಿಯನ್ನು ಊದಿದ ಕೂಡಲೇ ಅಳಿಲುಗಳೆಲ್ಲವೂ ತಮ್ಮತಮ್ಮ ಗೂಡುಗಳನ್ನು ಬಿಟ್ಟು ಬೇರೆಬೇರೆ ಗೂಡುಗಳಿಗೆ ಓಡಬೇಕು. ಐದು ಅಳಿಲು ಗಳಿಗೆ ನಾಲ್ಕೇ ಗೂಡುಗಳಿರುವುದರಿಂದ ಒಂದು ಅಳಿಲಿಗೆ ಗೂಡು ಸಿಕ್ಕುವು ದಿಲ್ಲ. ಆಗ ಆ ಅಳಿಲು ಬಂದು ಮಧ್ಯದಲ್ಲಿ ನಿಂತುಕೊಳ್ಳಬೇಕು. ಈಗ ಎಲ್ಲಾ ಗೂಡುಗಳಲ್ಲಿಯೂ ಅಳಿಲುಗಳಾಗಿದ್ದವರು ಗೂಡುಗಳ ಮೂಲೆಗಳೂ, ಮೂಲೆಗಳಾಗಿದ್ದವರು ಅಳಿಲುಗಳೂ ಆಗಬೇಕು. ಹೀಗೆ ಎಲ್ಲರಿಗೂ ಒಂದೊಂದು ಸರದಿಯಾದರೂ ಬರುವ ತನಕ ಆಡಿಸಬೇಕು.

## ೧೭. 'ಭಲ್ ಗುಡ್-ಗುಡ್-ಗುಡ್'

ಆಟಗಾರರನ್ನು ಎರಡು ಭಾಗವಾಗಿ ವಿಭಾಗಿಸಬೇಕು. ಅನಂತರ ಬಯಲಿನ ಮಧ್ಯದಲ್ಲಿ ಒಂದು ಉದ್ದವಾದ ಗೆರೆಯನ್ನು ಎಳೆದು,

ಆ ಗೆರೆಯ ಎರಡು ಕಡೆಗಳಲ್ಲಿಯೂ ಎರಡು ಭಾಗಗಳನ್ನೂ ನಿಲ್ಲಿಸಬೇಕು. ಶೀಟಿಯನ್ನು ಊದಿದ ನಂತರ ಮೊದಲನೆಯ ಭಾಗದಿಂದ ಒಬ್ಬನು ಒಂದೇ ಉಸಿರಿನಲ್ಲಿ 'ಭಲ್ ಗುಡ್-ಗುಡ್-ಗುಡ್''........ಎಂದು ಹೇಳುತ್ತಾ ಅವರಲ್ಲಿ ಯಾರನ್ನಾದರೂ ಮುಟ್ಟುವುದಕ್ಕೆ ಪ್ರಯತ್ನಿಸಬೇಕು; ಮತ್ತು ತನ್ನ ಉಸಿರು ನಿಲ್ಲುವುದಕ್ಕೆ ಮೊದಲೇ ಹಿಂದಿರುಗಿ, ಗೆರೆ ದಾಟಿ, ತನ್ನ ಭಾಗ ದವರು ಇರುವ ಕಡೆಗೆ ಬಂದು ಬಿಡಬೇಕು. ಹೀಗೆ ಬರುವಾಗ ಅವನು ಗೆರೆ ಯನ್ನು ದಾಟುವುದಕ್ಕೆ ಮೊದಲೇ ಎರಡನೆಯ ಭಾಗದವರು ಅವನನ್ನು ಹಿಡಿದುಕೊಂಡು ತಮ್ಮ ಕಡೆಗೆ ಎಳೆದುಕೊಂಡು ಹೋದರೆ ಅವನು ಸೆರೆ ಸಿಕ್ಕಿದಂತೆ. ಅನಂತರ ಎರಡನೆಯ ಭಾಗದಿಂದ ಒಬ್ಬನು ಅದೇ ರೀತಿ ಆಟವನ್ನು ತೋರಿಸಬೇಕು. ಹೀಗೆ ಈ ಆಟವನ್ನು ಯಾವುದಾದರೊಂದು ಕಡೆಯವರೆಲ್ಲಾ ಸೆರೆಸಿಕ್ಕುವವರೆಗೂ ಆಡಬಹುದು.

## ೧೮. ಬೆಸ್ತರ ಬಲೆ

ಮೊದಲು ಆಟಕ್ಕೆ ಒಂದು ಮೇರೆಯನ್ನು ಗೊತ್ತುಮಾಡಬೇಕು. ಇದಷ್ಟು ಕೆರೆ ಅಥವಾ ಕೊಳ. ಅದರೊಳಗೆ ಆಟಗಾರರೆಲ್ಲರೂ ಇರಬೇಕು. ಇವರೆಲ್ಲರೂ ಮೀನುಗಳು. ಮೀನುಗಳು ಕೆರೆಯಲ್ಲಿ ಬೇಕಾದ ಹಾಗೆ ಓಡಾಡಿಕೊಂಡಿರಬಹುದು, ಆದರೆ ಈಚೆಗೆ ಬರಕೂಡದು. ಒಬ್ಬನು ಕೆರೆಯ ಹೊರಗಿರಬೇಕು; ಇವನೇ ಬೆಸ್ತರ ಬಲೆ. ಈ ಬಲೆಯು ಕೆರೆಯನ್ನು ಪ್ರವೇ ಶಿಸಿ ಮೀನುಗಳನ್ನು ಹಿಡಿಯಲು ಷುರುಮಾಡುವುದು. ಬಲೆಯು ಯಾವ ಮೀನನ್ನು ಮುಟ್ಟುವುದೋ ಆ ಮೀನು ಬಂದು ಬಲೆಯ ಕೈಯನ್ನು ಹಿಡಿದುಕೊಳ್ಳಬೇಕು. ಈಗ ಬಲೆಗೆ ಇಬ್ಬರಾದಂತಾಯಿತು. ಈ ಬಲೆಯು ಇನ್ನು ಯಾವುದಾದರೊಂದು ಮೀನನ್ನು ಹಿಡಿಯಲು ಪ್ರಯತ್ನಿಸ ಬೇಕು. ಬಲೆಯು ತನ್ನ ಬರೀಕೈಗಳಿಂದ ಯಾವ ಮೀನನ್ನು ಮುಟ್ಟಿದರೂ, ಆ ಮೀನು ಬಂದು ಯಾವ ಕೈ ತನ್ನನ್ನು ಮುಟ್ಟಿತೋ ಆ ಕೈಯನ್ನೇ

ಹಿಡಿದುಕೊಳ್ಳಬೇಕು. ಹೀಗೆ ಬಲೆಯು ಬೆಳೆಯುತ್ತಾ ಹೋಗುತ್ತದೆ. ಆದರೆ ಕೊನೆಗಳಲ್ಲಿ ಮಾತ್ರ ಒಂದೊಂದು ಕೈ ಬರಿದಾಗಿರುತ್ತದೆ. ಇವೇ ಮೀನುಗಳನ್ನು ಹಿಡಿಯಲು ಶಕ್ಯ. ಮೀನುಗಳು ಎಲ್ಲಿಗೆ ಬೇಕಾದರೂ ಬಲೆಯನ್ನು ಹರಿಯದಂತೆ ನುಸಿದುಕೊಂಡು ಹೋಗಬಹುದು. ಹೀಗೆ ನುಸಿದುಕೊಂಡು ಹೋಗುವುದನ್ನು ಬಲೆಯು ತಡೆಯಬಾರದು. ಹೀಗೆ ಎಲ್ಲಾ ಮೀನುಗಳನ್ನು ಹಿಡಿಯುವವರೆಗೂ ಆಡಬಹುದು.

## ೧೯. 'ಕೊಕ್'

ಆಟಗಾರರನ್ನು ಎರಡು ಭಾಗವಾಗಿ ವಿಭಾಗಿಸಬೇಕು. ಇವರಲ್ಲಿ ಒಂದು ಭಾಗದವರು ಮೊದಲು ಕುಳಿತುಕೊಳ್ಳಬೇಕು. ಕುಳಿತುಕೊಳ್ಳುವುದರಲ್ಲಿ ಒಬ್ಬನು ವಿನಃ ಮಿಕ್ಕವರೆಲ್ಲರೂ, ಒಂದು ಒಂದೂವರೆ ಗಜದ ದೂರದಲ್ಲಿ ಸಾಲಾಗಿರಬೇಕು ; ಮತ್ತು ಮೊದಲನೆಯವನು ಕೊನೆಯವನು ಎದುರುಬದರಾಗಿಯೂ, ಉಳಿದವರು ಒಂದೇ ಕಡೆಗೆ ಮುಖವನ್ನು ತಿರುಗಿಸಿಕೊಂಡೂ ಕುಳಿತಿರಬೇಕು. ಇವರ ಮಧ್ಯೆ ಬಿಟ್ಟಿರತಕ್ಕ ಜಾಗಗಳಲ್ಲಿ ಎರಡನೆಯ ಭಾಗದವರೆಲ್ಲರೂ ಉದ್ದಕ್ಕೆ ಸಾಲಾಗಿ ನಿಂತುಕೊಳ್ಳಬೇಕು. ಆಗ ಕುಳಿತಿರುವವರ ಕಡೆಯ ಆಟಗಾರನೊಬ್ಬನು ಒಟ್ಟು ಸಾಲನ್ನು ಸುತ್ತುತ್ತಾ ನಿಂತಿರುವವರಲ್ಲಿ ಯಾರನ್ನಾದರೂ ಮುಟ್ಟಬೇಕು. ನಿಂತಿರುವವರು ಇವನು ಬರುವ ಕಡೆಯನ್ನೇ ನೋಡುತ್ತಿದ್ದು, ಒಂದು ಕಡೆಯಿಂದ ಇವನು ಬಂದರೆ ಇನ್ನೊಂದು ಕಡೆಗೆ ಅತಿ ಜಾಗ್ರತೆಯಾಗಿ ಓಡಬೇಕು. ಒಟ್ಟು ಸಾಲನ್ನು ಸುತ್ತುತ್ತಾ ಯಾರನ್ನಾದರೂ ಮುಟ್ಟಬೇಕೇ ವಿನಃ ಸಾಲುಗಳ ಮಧ್ಯೆ ಪ್ರವೇಶಿಸಕೂಡದು ; ಮುಟ್ಟಿಸಿಕೊಂಡವನು ಆಟದಿಂದ ಹೊರಗೆ ಹೋಗಬೇಕು. ಓಡುವವನು ತನಗೆ ಆಯಾಸವಾದಾಗ ಅಥವಾ ಸರಿಯಾದ ಸಮಯವನ್ನು ನೋಡಿ, ಕುಳಿತಿರುವವರಲ್ಲಿ ಯಾರಿಗಾದರೂ 'ಕೊಕ್' ಅನ್ನುವ ಸೂಚನೆ ಕೊಟ್ಟು, ಅವನನ್ನು ಆಟಕ್ಕೆ ಎಬ್ಬಿಸಿ, ಅವನ ಸ್ಥಳದಲ್ಲಿ ತಾನು ಕುಳಿತುಕೊಳ್ಳ

ಬೇಕು. ಆಗ ಅವನು ಹಿಂದೆ ಹೇಳಿದಂತೆಯೇ ಆಡಬೇಕು. ಎರಡನೆಯ ಸಾರ್ತಿ ಒದಲಾಯಿಸಿಕೊಂಡು ಆಡಬೇಕು.

## ೨೦. ವೃತ್ತದ ಚೆಂಡು

ಆಟಗಾರರನ್ನು ಎರಡು ಭಾಗವಾಗಿ ವಿಭಾಗಿಸಬೇಕು. ಹತ್ತು ಗಜಗಳ ಅಥವಾ ಆಟಗಾರರ ಸಂಖ್ಯೆಗೆ ತಕ್ಕಂತೆ ಸುತ್ತಳತೆಯುಳ್ಳ ವೃತ್ತದ ಒಳಗೆ ಒಂದು ಭಾಗದವರೆಲ್ಲರೂ ಚಿಲ್ಲಾಪಿಲ್ಲಿಯಾಗಿ ನಿಲ್ಲಬೇಕು. ಇನ್ನೊಂದು ಭಾಗದವರು ವೃತ್ತದಿಂದಾಚೆ ಸುತ್ತಲೂ ಸಮನಾದ ಅಂತರದಿಂದ ನಿಲ್ಲಬೇಕು. ನಾಯಕನು ಶೀಟಿಯನ್ನು ಊದಿದ ತಕ್ಷಣವೇ ಹೊರಗಿನವರು ಒಂದು ಚೆಂಡನ್ನು (ಈ ಆಟಕ್ಕೆ ಉಪಯೋಗಿಸುವ ಚೆಂಡು ದಪ್ಪನಾಗಿರಬೇಕು. 'ವಾಲಿಬಾಲ್' ಅಥವಾ ಮೂರನೆಯ ನಂಬರಿನ 'ಫುಟ್‌ಬಾಲ್' ಉತ್ತಮ) ವೃತ್ತದ ಒಳಗಿರುವ ಯಾರಿಗಾದರೂ ಗುರಿಯಿಟ್ಟು ಹೊಡೆಯಬೇಕು. ಒಬ್ಬರಿಂದೊಬ್ಬರಿಗೆ ಬದಲಾಯಿಸಿಕೊಂಡು ಹೊಡೆಯಬಹುದು. ಹೀಗೆ ಮಾಡುವಾಗ ಚೆಂಡನ್ನು ಜೋರಾಗಿ ಎಸೆದು ಅದನ್ನು ತರಲು ಕಾಲವಿಳಂಬವನ್ನು ಮಾಡಿಕೊಳ್ಳಬಾರದು. ಒಳಗಿರುವವರು ತಪ್ಪಿಸಿಕೊಳ್ಳಬೇಕು. ಆದರೆ ಹೀಗೆ ತಪ್ಪಿಸಿಕೊಳ್ಳಲು ವೃತ್ತದಿಂದಾಚೆಗೆ ಓಡಿಹೋಗಬಾರದು. ಚೆಂಡು ಯಾರಿಗೆ ತಗಲುವುದೋ ಅವನು ವೃತ್ತದಿಂದ ಹೊರಕ್ಕೆ ಬಂದುಬಿಡಬೇಕು. ನೆಲಕ್ಕೆ ಬಿದ್ದು ಪುಟವೆದ್ದಮೇಲೆ ತಗುಲಿದರೆ ಇಲ್ಲ. ಹೀಗೆ ಎಷ್ಟು ಹೊತ್ತಿನಲ್ಲಿ ವೃತ್ತದಲ್ಲಿನ ಹುಡುಗರೆಲ್ಲರೂ ಹೊರಗಾಗುವರೆಂಬುದನ್ನು ನಾಯಕನು ನೋಡಿಕೊಳ್ಳಬೇಕು. ಎರಡನೆಯ ಸಾರ್ತಿ ಬದಲಾಯಿಸಿಕೊಳ್ಳಬೇಕು. ಯಾವ ಭಾಗದವರು ತಮ್ಮ ಎದುರು ಭಾಗದವರನ್ನು ಜಾಗ್ರತೆಯಾಗಿ ಹೊರಗೆಡಹುವರೋ ಅವರೇ ಗೆದ್ದಂತೆ.

## ೨೧. 'ಬಸ್'

ಆಟಗಾರರೆಲ್ಲರೂ ವೃತ್ತಾಕಾರವಾಗಿ ಕುಳಿತಿರುವರು. ಆಟವು ಅಂಕಿಗಳನ್ನು ಎಣಿಸತಕ್ಕದ್ದು. ಈ ಎಣಿಕೆಯಲ್ಲಿ ಮೊದಲನೆಯವನು 'ಒಂದು'; ಎರಡನೆಯವನು 'ಎರಡು'; ಮೂರನೆಯವನು 'ಮೂರು'; ಹೀಗೆಯೇ ಒಬ್ಬೊಬ್ಬನೂ ಒಂದೊಂದು ಸಂಖ್ಯೆಯನ್ನು ಹೆಚ್ಚಿಸಿ ಎಣಿಸುತ್ತಾ ಹೋಗಬೇಕು. ಆದರೆ ಏಳು, ಏಳರ ಗುಣಿತಫಲ ಅಥವಾ ಏಳರಿಂದ ಕೂಡಿರುವ ಒಂದು ಸಂಖ್ಯೆ ಬಂದಾಗ, ಆ ಸಂಖ್ಯೆಗಳನ್ನು ಹೇಳಕೂಡದು. ಅದಕ್ಕೆ ಬದಲಾಗಿ 'ಬಸ್' ಎನ್ನಬೇಕು. ಹಾಗೆನ್ನದೆ ಮರೆತವನು ಆಟದಿಂದ ಹೊರಗೆ ಹೋಗಬೇಕು.

ಉದಾ:—೧, ೨, ೩, ೪, ೫, ೬, ಬಸ್, ೮, ೯, ೧೦, ೧೧, ೧೨, ೧೩, ಬಸ್, ೧೫, ೧೬, ಬಸ್, ೧೮, ೧೯, ೨೦, ಬಸ್, ೨೨, ೨೩, ೨೪, ೨೫, ೨೬, ಬಸ್, ಬಸ್, ೨೯, ೩೦, .... .... ....

೭೧, ೭೨, ೭೩, ೭೪, ೭೫, ೭೬, ೭೮, ೭೯, ಬಂದಾಗ. 'ಬಸ್ ಒಂದು', 'ಬಸ್ ಎರಡು' ಎಂದು ಮುಂತಾಗಿ ಹೇಳಬೇಕು. ೭೭ ಕ್ಕೆ 'ಬಸ್-ಬಸ್' ಎಂದು ಹೇಳಬೇಕು.

ಯಾವಾಗಲಾದರೂ ಒಬ್ಬ ಆಟಗಾರನು 'ಬಸ್' ಅನ್ನದೆಯಾಗಲಿ ಅಥವಾ ಬೇಕಿಲ್ಲದಾಗ ಅಂದಾಗಲಿ ಅಥವಾ ತಪ್ಪು ಅಂಕಿಯನ್ನು ಹೇಳಿದರೆ ಅವನು ವೃತ್ತದಿಂದ ಹೊರಗೆ ಹೋಗಬೇಕು. ಅವನ ಮುಂದಿನವನು ಎಣಿಕೆಯನ್ನು ಪುನಃ ಒಂದರಿಂದ ಪ್ರಾರಂಭಿಸಬೇಕು. ಹೀಗೆ ಒಬ್ಬನು ಉಳಿಯುವತನಕ ಆಡಬಹುದು.

## ೨೨. ತೋಳ-ಕುರುಬ

ಆಟಗಾರರಲ್ಲಿ ಬಲಶಾಲಿಗಳಾದ ಇಬ್ಬರಲ್ಲಿ ಒಬ್ಬ ತೋಳ, ಇನ್ನೊಬ್ಬ ಕುರುಬನನ್ನಾಗಿ ಮಾಡಬೇಕು. ಬಾಕಿ ಆಟಗಾರರೆಲ್ಲರೂ ಈ ಕುರುಬನ ಹಿಂದೆ ಸಾಲಾಗಿ ನಿಂತುಕೊಂಡು ತಮ್ಮ ಮುಂದಿರುವವರ ನಡುಕಟ್ಟನ್ನು ಬಲವಾಗಿ

ಹಿಡಿದುಕೊಳ್ಳಬೇಕು. ತೋಳನು ಕುರುಬನ ಹಿಂದೆ ಇರುವ ಕುರಿಗಳಲ್ಲಿ ಯಾವುದನ್ನಾದರೂ ಮುಟ್ಟಿದರೆ ಅದನ್ನು ತಿಂದಹಾಗಾಯಿತು. ಆಗ ಆ ಕುರಿಯು ಆಟದಿಂದ ಹೊರಗೆ ಹೋಗಬೇಕು. ಹೀಗೆ ಮುಟ್ಟುವುದಕ್ಕೆ ಬರುವಾಗ ತೋಳ ಮತ್ತು ಕುರುಬನಿಗೆ ಈ ಸಂಭಾಷಣೆಯು ನಡೆಯಬೇಕು:

ತೋಳ—ಏಕೇಕ್ ಬಕ್ರಾ ಖಾವುಂಗಾ
(ಒಂದೊಂದು ಕುರಿಯನ್ನು ತಿಂದೇನು)
ಕುರುಬ—ಸೋಲಾ ದಾತಾ ತೋಡುಂಗಾ
(ಹದಿನಾರು ಹಲ್ಲು ಮುರಿದೇನು)
ತೋಳ—ಬಾವ್ಡಿ ಖೂತ್ಕೊ ಆವುಂಗಾ
(ಭಾವಿ ಹಾರಿ ಬಂದೇನು)
ಕುರುಬ—ಕಾಟೆ ಬಿಛಾವುಂಗಾ
(ಮುಳ್ಳುಹಾಸಿಗೆ ಹಾಸೇನು)
ತೋಳ—ಏಕೇಕ್ ಬಕ್ರಾ ಖಾವುಂಗಾ

ಕುರುಬನು ತನ್ನ ಕುರಿಗಳನ್ನು ತಿನ್ನಲು ತೋಳನಿಗೆ ಅವಕಾಶ ಕೊಡ ಕೂಡದು. ಎರಡು ಕೈಗಳನ್ನೂ ಚಾಚಿಕೊಂಡು ಚಟುವಟಿಕೆಯಿಂದ ತೋಳನನ್ನು ತಡೆಯಬೇಕು.

## ೨೩. ಕಳ್ಳ-ಪೋಲೀಸ್

ಆಟಗಾರರೆಲ್ಲರೂ (ಇಬ್ಬರು ವಿನಃ) ಸರಿಯಾಗಿ ಚೌಕವಾಗುವಂತೆ ಸಾಲಾಗಿ ನಿಲ್ಲಬೇಕು. ಒಬ್ಬ ಆಟಗಾರನಿಂದ ಇನ್ನೊಬ್ಬನು ಯಾವ ಕಡೆಯಲ್ಲಾದರೂ ಚಾಚಿದ ಕೈಯಷ್ಟು ದೂರವಿರಬೇಕು. ಅಲ್ಲದೆ ಒಂದು ಸಾಲಿಗೂ ಅದರ ಹಿಂದಿನ ಸಾಲಿಗೂ ಅಷ್ಟೇ ದೂರವಿರಬೇಕು. ಚೌಕದಲ್ಲಿನ ಹುಡುಗರು ತಮ್ಮ ಎರಡು ಕೈಗಳನ್ನೂ ಚಾಚಿ ಹಿಡಿದು ಕೊಂಡಿರಬೇಕು. 'ವಿನಃ' ಈ ಇಬ್ಬರಲ್ಲಿ ಒಬ್ಬನು ಕಳ್ಳ, ಇನ್ನೊಬ್ಬನು

ಪೋಲೀಸಿನವ. ಕಳ್ಳನು ಒಂದು ಮೂಲೆಯಲ್ಲಿಯೂ ಪೋಲೀಸಿನವನು ಅವನಿಗೆ ಎದುರು ಮೂಲೆಯಲ್ಲಿಯೂ ನಿಲ್ಲಬೇಕು. ನಾಯಕನು ಶೀಟಿಯನ್ನು ಊದಿದಾಗಲೆಲ್ಲಾ ಚೌಕದವರೆಲ್ಲರೂ ತಾವು ಹಿಡಿದುಕೊಂಡಿದ್ದ ಕೈಗಳನ್ನು ಜಾಗ್ರತೆಯಾಗಿ ಬಿಟ್ಟು ಬಲಕ್ಕೆ ತಿರುಗಿ, ತಮ್ಮ ಎಡಬಲಗಳಲ್ಲಿರುವವರ ಕೈಗಳನ್ನು ಮೊದಲಿನಂತೆಯೇ ಹಿಡಿದುಕೊಳ್ಳಬೇಕು. ಈ ಓಣಿಗಳಲ್ಲಿ ಕಳ್ಳನು ಪೋಲೀಸಿನವನಿಂದ ತಪ್ಪಿಸಿಕೊಂಡು ಓಡಾಡಬೇಕು. ಪೋಲೀಸಿನವನು ಕಳ್ಳನ ಸಮೀಪಕ್ಕೆ ಬಂದನೆಂದು ತೋರಿದರೆ ಕೂಡಲೇ ನಾಯಕನು ಶೀಟಿಯನ್ನು ಊದಬೇಕು. ಚಾಚಿದ ಕೈಗಳನ್ನು ನೂಕಿಕೊಂಡಾಗಲೀ ಅದರ ಕೆಳಗೆ ನುಗ್ಗಿಯಾಗಲೀ ಹೋಗಕೂಡದು. ಪೋಲೀಸಿನವನು ಕಳ್ಳನನ್ನು ಒಂದು ಕ್ಲಿಪ್ತಕಾಲದಲ್ಲಿ ಹಿಡಿಯಬೇಕು. ಇಲ್ಲದಿದ್ದರೆ ಅವನು ಸೋತಂತೆ; ಕಳ್ಳನು ಗೆದ್ದಂತೆ. ಆ ಮೇಲೆ ಹಿಡಿಯಲಿ ಹಿಡಿಯದಿರಲಿ ಅವರಿಬ್ಬರೂ ಹೋಗಿ ಯಾವುದಾದರೊಂದು ಪಂಙ್ತಿಗೆ ಸೇರಬೇಕು. ಆ ಜಾಗದಲ್ಲಿದ್ದವರು ಕಳ್ಳ ಪೋಲೀಸಿನವನಾಗಬೇಕು. ನಾಯಕನು ಬೇಗ ಬೇಗನೆ ಒಳ್ಳೆಯ ಸ್ವಾರಸ್ಯವಾದ ಸಮಯಗಳನ್ನು ನೋಡಿಕೊಂಡು ಶೀಟಿಯನ್ನು ಊದುತ್ತ ಬರಬೇಕು.

## ೨೪. ನಾದದ ಕ್ರೈ

ಆಟಗಾರರನ್ನೆಲ್ಲಾ ಎರಡು ಭಾಗವಾಗಿ ವಿಭಾಗಿಸಬೇಕು. ಈಗ ಒಂದು ಭಾಗದವರೆಲ್ಲರೂ ಕಂಭಗಳು ; ಇನ್ನೊಂದು ಭಾಗದವರೆಲ್ಲರೂ ಓಡುವವರು. ಓಡುವವರ ಸಂಖ್ಯೆಯು ಕಂಭಗಳಿಗಿಂತ ಒಂದು ಹೆಚ್ಚಾಗಿರಬೇಕು. ಈಗ ಈ ಕಂಭಗಳನ್ನೆಲ್ಲಾ ಸುಮಾರು ಐದು ಗಜಗಳ ದೂರದಲ್ಲಿ (ಒಬ್ಬನು ಪೂರ್ವಾಭಿಮುಖವಾಗಿ ನಿಂತರೆ ಇನ್ನೊಬ್ಬನು ಪಶ್ಚಿಮಾಭಿಮುಖವಾಗಿ, ಈ ರೀತಿ) ನಿಲ್ಲಿಸಬೇಕು. ಓಡುವವರೆಲ್ಲರೂ ಐದು ಗಜಗಳ ದೂರದಲ್ಲಿ ಸಾಲಾಗಿ ನಿಲ್ಲಬೇಕು. ನಾಯಕನು ಶೀಟಿಯನ್ನು ಊದುತ್ತಿದ್ದ ಹಾಗೆಯೇ

ಅಥವಾ ರಾಗಮಾಲಿಕೆಯನ್ನೋ ಅಥವಾ ಇನ್ನು ಯಾವುದಾದರೂ ಸಂಗೀತ ವನ್ನೋ ಷುರುಮಾಡುತ್ತಿದ್ದ ಹಾಗೆಯೇ, ಇವರೆಲ್ಲರೂ ಒಂದೇ ಕಡೆಯಲ್ಲಿ ಓಡಬೇಕು. ಇವರು ಓಡುವಾಗ ಕಂಭಗಳು ತಮ್ಮ ತಮ್ಮ ಬಲಗೈಗಳನ್ನು ಮೊಳಕೈನಿಂದ ಮೇಲಕ್ಕೆ ಎತ್ತಿ ಹಿಡಿದಿರಬೇಕು. ಸಂಗೀತವು ನಿಂತ ಅಥವಾ ಶೀಟಿಯನ್ನು ಪುನಃ ಊದಿದ ತಕ್ಷಣವೇ ಅವರು ಒಬ್ಬೊಬ್ಬರು ಒಂದೊಂದು ಕಂಭದ ಕೈಯನ್ನು ಹಿಡಿದುಕೊಳ್ಳಬೇಕು. ಯಾವನಾದರೂ ಒಬ್ಬನಿಗೆ ಕಂಭ ವಿರುವುದಿಲ್ಲ. ಆಗ ಅವನು ಹೊರಗೆ ಹೋಗಬೇಕು. ಆಗ ಒಂದು ಕಡೆಯ ಕಂಭವನ್ನೂ ತೆಗೆದುಹಾಕಬೇಕು. ಮತ್ತೆ ಮೊದಲಿನಂತೆಯೇ. ಹೀಗೆಯೇ ಆಗಿ ಕಡೆಯಲ್ಲಿ ಒಂದು ಕಂಭ, ಇಬ್ಬರು ಓಡುವವರು ಉಳಿಯುವರು. ಅವರಿಗೆ ಓಡುವ ಜಾಗವನ್ನು ನಿಯಮಿಸಲು ಇನ್ನೊಂದು ಕಂಭವನ್ನು ಸುಮ್ಮನೆ ನಿಲ್ಲಿ ಸಿರಬೇಕು. ಆಗ ನಾಯಕನು ಕಣ್ಣುಮುಚ್ಚಿಕೊಂಡು ಶೀಟಿಯನ್ನು ಹಾಕ ಬೇಕು ; ಅಥವಾ ಸಂಗೀತವನ್ನು ನಿಲ್ಲಿಸಬೇಕು. ಆಗ ಯಾರಿಗೆ ಕೈಸಿಕ್ಕು ವುದೋ ಅವನೇ ಗೆದ್ದಂತೆ. ಎರಡನೆಯಸಲ ಓಡಿದವರೆಲ್ಲರೂ ಕಂಭಗಳು, ಕಂಭಗಳೆಲ್ಲರೂ ಓಡುವವರು.

## ೨೫. ಜ್ಞಾಪಕಶಕ್ತಿಯ ಆಟಗಳು

೧. ನಾಯಕನು ತನ್ನ ಸಮರೂಪದಲ್ಲಿ ಕೆಲವು ವ್ಯತ್ಯಾಸಗಳನ್ನು ಮಾಡಿಕೊಂಡು ಬಂದು, ಒಂದೆರಡು ನಿಮಿಷಗಳ ವರೆಗೆ ಆಟಗಾರರ ಸಂಗಡ ಮಾತನಾಡುತ್ತಿದ್ದು ಆ ಮೇಲೆ ವ್ಯತ್ಯಾಸಗಳನ್ನೆಲ್ಲಾ ಸರಿಪಡಿಸಿಕೊಂಡು ಬರಬೇಕು. ಆ ಮೇಲೆ ಆಟಗಾರರು ತಾವು ಗಮನಿಸಿದಷ್ಟು ವ್ಯತ್ಯಾಸಗಳನ್ನು ಒಂದು ಕ್ಲಿಪ್ತಕಾಲದಲ್ಲಿ ಬರೆದುಕೊಡಬೇಕು.

೨. ಹುಡುಗರಿಗೆ ಪರಿಚಯವಿರತಕ್ಕ ಇಪ್ಪತ್ತುನಾಲ್ಕು ತರಹ ವಸ್ತುಗಳನ್ನು ಒಂದು ಬಟ್ಟೆಯ ಮೇಲೆ ಬಿಡಿಸಿ ಇಟ್ಟು ಅದರ ಮೇಲೆ ಇನ್ನೊಂದು ಬಟ್ಟೆಯನ್ನು ಹೊದಿಸಬೇಕು. ನಂತರ ಆಟಗಾರರನ್ನೆಲ್ಲಾ

ಅದರ ಸುತ್ತಲೂ ಸಿಲ್ಲಿಸಿ, ಮುಸುಕನ್ನು ತೆಗೆದು, ಅವರು ಆ ಸಾಮಾನು ಗಳನ್ನು ನೋಡಲು ಒಂದು ನಿಮಿಷ ಮಾತ್ರ ಅವಕಾಶಕೊಟ್ಟು, ಪುನಃ ಮುಚ್ಚಿ ಬಿಡಬೇಕು. ಆ ಮೇಲೆ ಆಟಗಾರರು ತಮಗೆ ಜ್ಞಾಪಕವಿರುವಷ್ಟು ವಸ್ತುಗಳನ್ನು ಒಂದು ಕ್ಲಿಪ್ತಕಾಲದಲ್ಲಿ ಬರೆದು ಕೊಡಬೇಕು.

೩. ಆಟಗಾರರೆಲ್ಲರೂ ವೃತ್ತಾಕಾರವಾಗಿ ಕುಳಿತುಕೊಂಡು, ಯಾವ ನಾದರೊಬ್ಬನು ಮೊದಲು ಒಂದು ಪದಾರ್ಥದ ಹೆಸರನ್ನು ಹೇಳುತ್ತಾ ಬರ ಬೇಕು. ಹೀಗೆ ಹೇಳುವಾಗ ಮುಂದಿನವರು ಹಿಂದಿನವರು ಹೇಳಿದ ಪದಾರ್ಥ ಗಳನ್ನೆಲ್ಲಾ ಕ್ರಮವರಿತು ಹೇಳಿ, ನಂತರ ತಮ್ಮ ಪದಾರ್ಥದ ಹೆಸರನ್ನು ಹೇಳಬೇಕು.

ಉದಾ :—ಈಗ ಪ್ರತಿಯೊಬ್ಬರೂ 'ಕ' ಕಾರದಿಂದ ಪ್ರಾರಂಭಿಸುವ ಪದಾರ್ಥಗಳ ಹೆಸರುಗಳನ್ನೇ ಹೇಳಬೇಕು ಎನ್ನೋಣ. ಹೇಳಿದ ಕ್ರಮವು ಹೀಗಿದೆ: ಕಬ್ಬು, ಕಡಬು, ಕಬ್ಬಿಣ, ಕತ್ತರಿ....ಇತ್ಯಾದಿ. ಈಗ ಮುಂದಿ ನವನು ಹಿಂದಿನ ಪದಾರ್ಥಗಳ ಹೆಸರುಗಳನ್ನೆಲ್ಲಾ ಕ್ರಮವಾಗಿ ಹೇಳಿ, ತಾನೂ 'ಕ' ಕಾರದಿಂದ ಪ್ರಾರಂಭಿಸುವ ಒಂದು ಪದಾರ್ಥದ ಹೆಸರನ್ನು ಹೇಳಬೇಕು : ಕಬ್ಬು, ಕಡಬು, ಕಬ್ಬಿಣ, ಕತ್ತರಿ, ಕತ್ತಿ. ಕ್ರಮ ತಪ್ಪಿದಲ್ಲಿ ಹೊರಗೆ ಹೋಗಬೇಕು.

---

# ಕುಣಿತಗಳು

—: 0 :—

## ೧. ಬಾಲು ಕುಣಿತ

ಮರಿಗಳೆಲ್ಲರೂ ವೃತ್ತಾಕಾರವಾಗಿ ಬಲಗಡೆಗೆ ತಿರುಗಿ ನಿಲ್ಲಬೇಕು. ಶೀಟಿಯನ್ನು ಊದಿದ ಕೂಡಲೇ ಎಲ್ಲರೂ ನಾಯಕನನ್ನು ಅನುಸರಿಸುತ್ತಾ, ಎದೆಯನ್ನು ಚೆನ್ನಾಗಿ ಮುಂದಕ್ಕೆ ಚಾಚಿ, ಕೈಗಳನ್ನು ಒಂದೊಂದಾಗಿ ಮುಂದಕ್ಕೆ ಬೀಸುತ್ತಾ, ಜಂಭದಿಂದ ಅತ್ತ ಇತ್ತ ನೋಡುತ್ತಾ, ನೆಟ್ಟಗೂ ನಿಧಾನವಾಗಿಯೂ ನಡೆಯಬೇಕು; ಹೀಗೆ ನಡೆಯುವಾಗ ಮರಿಗಳ ನಿಯಮವನ್ನು ಘಟ್ಟಿಯಾಗಿ ಹೇಳಬೇಕು :—

ಮರಿಯು ಹಿರಿಯರಿಗೆ ವಿಧೇಯನು ;

ಮರಿಯು ತನಗೆ ತಾನೇ ಸೋಲುವುದಿಲ್ಲ.

ನಾಯಕನು ಶೀಟಿಯನ್ನು ಊದಿದಾಗ ಕುಣಿತವು ನಿಲ್ಲುವುದು.

## ೨. ತಬಾಕಿ ಕುಣಿತ

ಷೇರ್‌ಖಾನನು ತಿಂದು ಉಳಿದಿದ್ದ ಪ್ರಾಣಿಯ ಸುತ್ತಲೂ ನರಿಗಳು ಸೇರಿ, ಆ ಎಂಜಲನ್ನು ತಿನ್ನಲು ಅನುಮಾನಿಸುತ್ತಾ ಹೊಂಚುಹಾಕುತ್ತಿದ್ದುದನ್ನು ತೋರಿಸುವ ನೃತ್ಯವಿದು. ವೃತ್ತದ ಮಧ್ಯದಲ್ಲಿ ಮರಿಗಳು ತಿನ್ನಬಹುದಾದ ತಿಂಡಿಯಿದ್ದರಂತೂ ನೃತ್ಯವು ಬಲು ಚೆನ್ನಾಗಿಯೇ ಇರುವುದು.

ನರಿಗಳೆಲ್ಲವೂ ವೃತ್ತಾಕಾರವಾಗಿ ಕುಳಿತುಕೊಂಡು, ಮೊದಲು ಹೂಂಕಾರವನ್ನು ಮೆಲ್ಲಗೂ, ಆ ಮೇಲೆ ಸ್ವಲ್ಪ ಜೋರಾಗಿಯೂ, ಬಳಿಕ ಇನ್ನೂ ಜೋರಾಗಿಯೂ ಮಾಡಿ, ಅನಂತರ ಘಟ್ಟಿಯಾಗಿಯೂ, ಹ್ರಸ್ವವಾಗಿಯೂ

'ಹುಃ !!' ಎನ್ನುತ್ತಲೇ ಚಪ್ಪಾಳೆ ತಟ್ಟಿ, ತಿಂಡಿಯಕಡೆಗೆ ಹಾರಿ, ಅದನ್ನು ಮುಗಿಸಿಬಿಡಬೇಕು.

ಹೂ ೦ ೦ ೦ ೦ ೦ ೦

ಹೂ ೦ ೦ ೦ ೦ ೦ ೦

ಹೂ ೦ ೦ ೦ ೦ ೦ ೦

ಹುಃ ! !

## ೩. ಭಗೀರನ ಕುಣಿತ

ಭಗೀರನ ಕುಣಿತಕ್ಕೆ ಮರಿಗಳೆಲ್ಲರೂ ಚಿರತೆಗಳಾಗಬೇಕು. ಈ ಚಿರತೆಗಳೆಲ್ಲವೂ ವೃತ್ತಾಕಾರವಾಗಿ ಕುಳಿತು ಅಂಬೆಗಾಲಿಡುತ್ತಾ ಬೇಟೆಗೆ ಏನಾದರೂ ಸಿಕ್ಕುವುದೋ ಎಂದು ಹುಡುಕುವಂತೆ ಎಡಕ್ಕೂ ಬಲಕ್ಕೂ ತಿರುಗಾಡುತ್ತಿರಬೇಕು. ಅಷ್ಟರಲ್ಲಿಯೇ ವೃತ್ತದ ಮಧ್ಯದಲ್ಲಿ ಏನೋ ಕಾಣುವುದು. ಆಗ ಪ್ರತಿ ಚಿರತೆಯೂ ಕುಳಿತುಕೊಂಡು ಅದನ್ನು ದುರುದುರನೆ ನೋಡಬೇಕು. (ಅದು ಒಂದು ಮೇಯುತ್ತಿರುವ ಜಿಂಕೆಯೆಂದು ಭಾವಿಸಿಕೊಳ್ಳಬೇಕು. ಮರಿಗಳು ಅಭಿನಯಿಸುವಾಗ ಪೆಪ್ಪರ್‌ಮೆಂಟ್ ಅಥವಾ ಬಿಸ್ಕತ್ತನ್ನು ಇಟ್ಟರೆ ಸ್ವಾರಸ್ಯ ಹೆಚ್ಚು.) ಆಮೇಲೆ ಆ ಜಿಂಕೆಗೆ ಕಾಣಿಸಿಕೊಳ್ಳದಂತೆ ಆ ಕಡೆ ಈ ಕಡೆ ತಿರುಗಿ, ಕೆಲವು ಹೆಜ್ಜೆಗಳು ಹಿಂದಕ್ಕೆ ಬರಬೇಕು. ನಂತರ ಪುನಃ ಮುಂದಕ್ಕೆ ನಿಧಾನವಾಗಿ ಹೋಗಬೇಕು. ಹತ್ತಿರ ಹೋದ ಹಾಗೆಲ್ಲಾ ಸದ್ದಾಗದಂತೆ ಮೆಲ್ಲನೆ ನಡೆಯಬೇಕು. ಹತ್ತಿರಕ್ಕೆ ಹೋದಮೇಲೆ ಮಲಗಿಕೊಳ್ಳಬೇಕು. ಆಗ ನಾಯಕನು ಸಮಯವನ್ನು ಕಾದಿದ್ದು 'ಹು' ಎಂದ ಕೂಡಲೇ ಎಲ್ಲರೂ ಘರ್ಜನೆಯನ್ನು ಮಾಡುತ್ತಾ ಆ ಊಹೆಯ ಜಿಂಕೆಯ ಮೇಲೆ ಬಿದ್ದು ಅದನ್ನು ಕಿತ್ತಾಡಬೇಕು.

ಕುಣಿತದ ಕಾಲದಲ್ಲಿ ಪ್ರತಿ ಚಿರತೆಯೂ ನಾಯಕನನ್ನೇ ನೋಡುತ್ತಾ, ಅವನು ಮಾಡಿದಂತೆಯೇ ಮಾಡಬೇಕು.

## ೫. ಮೌಗ್ಲಿಯ ಬೇಟೆ

ಮೌಗ್ಲಿಯ ಬೇಟೆ !
ಮೌಗ್ಲಿಯ ಬೇಟೆ !
ಹುಲಿಯಸು ಕೊಲ್ !
ಹುಲಿಯಸು ಕೊಲ್ !
ವ್ಯಾಘ್ರದ ಚರ್ಮವ ಸುಲೀ ಸುಲೀ !
ವ್ಯಾಘ್ರದ ಚರ್ಮವ ಸುಲೀ ಸುಲೀ !
ಭಲಾ ಭಲಾ ಭಲ್ !
ಭಲಾ ಭಲಾ ಭಲ್ !

ಮೌಗ್ಲಿಯು, ಷೇರ್‌ಖಾನನನ್ನು ಕೊಲ್ಲುವಾಗ ಹೇಳಿದ ಹಾಡು ಇದು.

ಮರಿಗಳೆಲ್ಲರೂ ಚಕ್ರಾಕಾರವಾಗಿ ನಿಂತುಕೊಂಡು, ಬಲಕ್ಕೆ ತಿರುಗಿ, ಎಡಗೈಯನ್ನು ಹಣೆಯ ಮುಂದುಗಡೆ—ಬಿಸಲಿಗೆ ಅಡ್ಡಲಾಗಿ ಹಿಡಿಯುವಂತೆ—ಹಿಡಿದು, ದೂರಕ್ಕೆ ಹಿಣಿಕಿ ನೋಡುವಹಾಗೆ ಮುಂದಕ್ಕೆ ಒಗ್ಗಿ ನೋಡುತ್ತಾ, ಬಲಗೈಯನ್ನು ಬೆನ್ನುಹಿಂದೆ ಸೇರಿಸಿ 'ಮೌಗ್ಲಿಯ ಬೇಟೆ !' ಎನ್ನುತ್ತಾ ಒಂದು ಹೆಜ್ಜೆಯನ್ನು ಮುಂದಕ್ಕೆ ಇಡಬೇಕು.

ನಂತರ ಬಲಗೈಯನ್ನು ಹಿಡಿದು ನೋಡುತ್ತಾ, ಎಡಗೈಯನ್ನು ಬೆನ್ನು ಹಿಂದೆ ಸೇರಿಸಿ 'ಮೌಗ್ಲಿಯ ಬೇಟೆ !' ಎನ್ನುತ್ತಾ ಇನ್ನೊಂದು ಹೆಜ್ಜೆಯನ್ನು ಇಡಬೇಕು.

'ಹುಲಿಯಸು ಕೊಲ್ !' ಎನ್ನುವಾಗ, ಹುಲಿಯನ್ನು ತಿವಿಯುವಂತೆ ಮೊದಲು ಬಲ, ಆಮೇಲೆ ಎಡಗೈಗಳಿಂದ ಅಭಿನಯಿಸುತ್ತಾ ಹೆಜ್ಜೆಗಳನ್ನಿಡಬೇಕು.

'ವ್ಯಾಘ್ರದ ಚರ್ಮವ ಸುಲೀ ಸುಲೀ !' ಎನ್ನುವಾಗ, ಚರ್ಮ

ವನ್ನು ಎರಡು ಕೈಗಳಿಂದಲೂ ಸುಲಿಯುವಂತೆ ತೋರಿಸುತ್ತಾ ಇನ್ನೊಂದು ಹೆಜ್ಜೆಯನ್ನು ಇಡಬೇಕು.

'ಭಲಾ ಭಲಾ ಭಲ್ !' ಎನ್ನುವಾಗ, ಮೊದಲು ಎಡದಾ ತೋಳನ್ನು ಮೇಲಕ್ಕೆತ್ತಿ ಬಲಗಾಲಿನಮೇಲೆ ಎಡಗಡೆಗೂ, ಆಮೇಲೆ ಬಲದಾ ತೋಳನ್ನೆತ್ತಿ ಎಡಗಾಲಿನ ಮೇಲೆ ಬಲಗಡೆಗೂ ಸಂತೋಷವನ್ನು ತೋರಿಸುವಂತೆ ತಿರುಗಬೇಕು. ಒಂದು ಕೈಯನ್ನು ಎತ್ತಿದಾಗ ಇನ್ನೊಂದು ಕೈ ಸೊಂಟದ ಮೇಲಿರಬೇಕು.

## ೫. ಕಾ ಕುಣಿತ

ಒಬ್ಬನು ಕಾವಿನ ಹೆಡೆಯಾಗಿ ಮುಂದೆ ನಿಲ್ಲಬೇಕು. ಇತರರು ಒಬ್ಬರ ಹಿಂದೆ ಒಬ್ಬರಂತೆ ನಿಂತು, ತಮ್ಮ ಕೈಗಳಿಂದ ಮುಂದಿರುವವರ ಭುಜಗಳನ್ನು ಹಿಡಿದುಕೊಂಡು, ತಮ್ಮ ತಲೆಗಳನ್ನು ಅವರ ಬೆನ್ನು ಮೇಲೆ ಇಟ್ಟು, ಹಾವಿನ ಆಕಾರವನ್ನು ರಚಿಸಬೇಕು. ಮುಂದಿನವನು ಮಾತ್ರ ತನ್ನ ಕೈಗಳನ್ನು ಹೆಡೆಯ ಆಕಾರದಂತೆ ಮುಖದ ಹತ್ತಿರ ಹಿಡಿದು, ಪ್ರತಿ ಕೈಸ ಎರಡು ದೊಡ್ಡ ಬೆರಳುಗಳಿಂದಲೂ ಹಾವು ನಾಲಿಗೆಯನ್ನು ಆಡಿಸುವಂತೆ ಆಡಿಸುತ್ತಿರಬೇಕು. ಬೇಕಾದರೆ ಅವನ ಮುಖಕ್ಕೆ ಒಂದು ರೊಟ್ಟಿನ ಹಾವಿನ ಹೆಡೆಯನ್ನೇ ಕಟ್ಟಬಹುದು.

ನಾಯಕನು ಶೀಟಿಯನ್ನು ಊದುತ್ತಲೆ ಹಾವು ಬುಸುಗುಟ್ಟುತ್ತಾ ೧೦ ಈ ಆಕಾರದಲ್ಲಿ ತಿರುಗಿ, ನಂತರ ವೃತ್ತಾಕಾರವಾಗಿ ಸುತ್ತಿ, ಪುನಃ ಹಿಂದಕ್ಕೆ ತಿರುಗಿ ಮೊದಲಿನ ಸ್ಥಿತಿಗೆ ಬರಬೇಕು.

ಇಷ್ಟುಕಾಲವೂ ಎಲ್ಲರೂ ಹೆಜ್ಜೆಗಳನ್ನು ನೆಲದಮೇಲೆ ಊರದೆ, ಸದ್ದಾಗದಂತೆ ಬೆರಳುಗಳ ಮೇಲೆಯೇ ನಡೆಯಬೇಕು, ಮತ್ತು ಹಾವಿನಂತೆ ಬುಸುಗುಟ್ಟುತ್ತಿರಬೇಕು. ಅಂದರೆ ಒಟ್ಟಿನಲ್ಲಿ ಒಂದು ದೊಡ್ಡ ಹಾವೇ ಹುಲ್ಲಿನ ಮೇಲೆ ಹರಿಯುವಂತಿರಬೇಕು.

ಕಾ ವು ಈ ರೀತಿಯಾಗಿ ಸುತ್ತಿ, ಬಿಚ್ಚಿಕೊಂಡ ನಂತರ ನಾಯಕನು 'ಬಂದರ್‌ಲೋಗ್' ಎನ್ನಬೇಕು. ಆಗ ಮರಿಗಳೆಲ್ಲವೂ ದೂರದೂರ ಹೋಗಿ ಚೆಲ್ಲಾಪಿಲ್ಲಿಯಾಗಿ ಕಪಿಗಳಂತೆ ಚೇಷ್ಟೆ ಮಾಡುತ್ತಿರಬೇಕು. ಹೆಡೆಯು ವಿನಃ.

ನಾಯಕನು 'ಕಾ' ಎಂದ ಕೂಡಲೆ ಮರಿಗಳು ಸತ್ತಂತೆ ಮುಖವನ್ನು ಮುಚ್ಚಿಕೊಂಡು ಮಲಗಬೇಕು. ಆಗ ಕಾ ವು ಕಪಿಗಳನ್ನೆಲ್ಲಾ ಒಂದೊಂದನ್ನಾಗಿ ತಿನ್ನುತ್ತಾ ಬರುವುದು. ಇದನ್ನು ಅಭಿನಯಿಸಲು ಅದು ಒಂದು ಮರಿಯ ತಲೆಯಮೇಲೆ ಮೆಲ್ಲನೆ ಮುಟ್ಟುವದು. ಆಗ ಆ ಮರಿಯು ಅದರ ಕಾಲುಸಂದಿನಲ್ಲಿ ನುಸಿದರೆ ತಿಂದಂತಾಯಿತು. ಹೀಗೆ ನುಂಗಲ್ಪಟ್ಟ ಕಪಿಗಳೆಲ್ಲವೂ ಅದರ ಕಾಲುಸಂದಿನಲ್ಲಿ ನುಸಿದು, ಮೊದಲು ಹಿಡಿದುಕೊಂಡಿದ್ದಂತೆ ಹಿಡಿದುಕೊಳ್ಳಬೇಕು. ಹೀಗೆ ಕಾ ವು ಕಪಿಗಳನ್ನು ನುಂಗುವಾಗ, ಮೊದಲು ಯಾರಾದಮೇಲೆ ಯಾರು ನಿಂತಿದ್ದರು ಎಂಬುದನ್ನು ಜ್ಞಾಪಕವಿಟ್ಟುಕೊಂಡಿದ್ದು, ಅದೇ ರೀತಿಯಲ್ಲಿಯೇ ನುಂಗುತ್ತ ಬರಬೇಕು. ಆಮೇಲೆ ಪುನಃ ಹಾವು ಸುತ್ತಾಡಿ ಒಂದು ಮರಕ್ಕೆ ಸುತ್ತಿಕೊಂಡಂತೆ ಸುತ್ತಿಕೊಂಡು ನಿದ್ದೆ ಹೋಗಬೇಕು. ಆಗ ಮರಿಗಳು 'ಫಟ್! ಫಟ್!' ಎನ್ನುತ್ತಾ ಕುಳಿತುಬಿಡಬೇಕು. ಫಟ್! ಫಟ್! ಎಂದರೆ ತಿಂದ ಕಪಿಗಳ ಮೂಳೆಗಳು ಹಾವಿನ ಹೊಟ್ಟೆಯಲ್ಲಿ ಮರಕ್ಕೆ ಸುತ್ತಿಕೊಂಡಾಗ ಮುರಿಯುವ ಶಬ್ದವನ್ನು ಸೂಚಿಸುವುದಕ್ಕೆ.

**ಮುಗಿಯಿತು**



# ಘೂರ್ಜನೆ

ಮಕ್ಕಳಿಗೆ ಕಥೆಗಳನ್ನು ಕೇಳುವುದರಲ್ಲಿ ಬಹಳ ಇಷ್ಟ. ಇದು ಎಲ್ಲ ಜನಾಂಗಗಳಲ್ಲಿಯೂ, ಎಲ್ಲ ದೇಶಗಳಲ್ಲಿಯೂ ಕಂಡುಬಂದಿರುವ ಲಕ್ಷಣ. ಚೆನ್ನಾಗಿ ಕಥೆ ಹೇಳುವವರು ಸಿಕ್ಕಿದರೆ ಮಕ್ಕಳು ಊಟಕ್ಕೂ ನಿದ್ರೆಗೂ ಹೊತ್ತಾದುದನ್ನು ಕೂಡ ಗಮನಿಸದೆ ಕಥೆಯನ್ನು ಕೇಳುವುದುಂಟು. ಅಳು ತ್ತಿರುವ ಮಕ್ಕಳಿಗೆ ಸಮಾಧಾನವನ್ನುಂಟುಮಾಡಬೇಕಾದರೆ "ಅಳು ನಿಲ್ಲಿಸಿ ದರೆ ಒಳ್ಳೆಯದೊಂದು ಕಥೆ ಹೇಳ್ತೀನಿ" ಎಂಬುದೇ ಮಹಾಮಂತ್ರ. ಆ ಮಾತುಗಳನ್ನು ಕೇಳಿದಾಗ ಅನೇಕ ಮಕ್ಕಳು ಒಡನೆಯೇ ನಕ್ಕು ಉತ್ಸಾಹವನ್ನು ತೋರಿಸುವುದನ್ನು ಎಲ್ಲರೂ ಬಲ್ಲರು. ಕಣ್ಣೀರನ್ನು ಸುರಿಸುತ್ತಿರುವಾಗಲೇ ಹಾಗೆ ನಗುವ ಮಕ್ಕಳನ್ನು ನೋಡಿ ಇಬ್ಬನಿಯಲ್ಲಿ ನೆನೆದಿರುವ ನಿತ್ಯ ಮಲ್ಲಿಗೆಯ ಹೂಗಳು ಯಾರ ನೆನಪಿಗೆತಾನೆ ಬರುವುದಿಲ್ಲ?

ಕಥೆಗಳನ್ನು ಕೇಳುವುದರಲ್ಲಿ ಮಕ್ಕಳು ಕಾಲವನ್ನಾಗಲಿ, ಅಕಾಲ ವನ್ನಾಗಲಿ, ನೋಡುವುದಿಲ್ಲ. ಬೆಳಗಿನ ವೇಳೆಯಾಗಲಿ, ಮಧ್ಯಾಹ್ನದ ವೇಳೆಯಾಗಲಿ, ಸಂಜೆಯ ವೇಳೆಯಾಗಲಿ, ಯಾವ ಸಮಯದಲ್ಲಿ ನೋಡಿ ದರೂ ಮಕ್ಕಳು ಕಥೆಯನ್ನು ಕೇಳಲು ತವಕಪಡುವುದು ಎಲ್ಲರ ಅನುಭವ ದಲ್ಲಿಯೂ ಕಂಡುಬಂದಿರುವ ಸಂಗತಿ. ತಾವು ಕೇಳಿದಾಗಲೆಲ್ಲ ಕಥೆಯನ್ನು ಹೇಳುವ ಅಜ್ಜಿಯನ್ನೋ, ತಾತನನ್ನೋ, ತಾಯಿಯನ್ನೋ, ತಂದೆಯನ್ನೋ ಕಂಡರೆ ಮಕ್ಕಳಿಗೆ ಪ್ರಾಣ. ಕಥೆ ಹೇಳುವುದರ ಪ್ರತಿಫಲಕ್ಕಾಗಿ ಎಷ್ಟು ಸಲ ಮುತ್ತನ್ನು ಕೇಳಿದರೂ ಮಕ್ಕಳು ಇಲ್ಲವೆನ್ನದೆ, ತಮ್ಮ ಹೃದಯದಲ್ಲಿ ರುವ ಕುತೂಹಲವನ್ನೇ ಮುದ್ರೆ ಯೊತ್ತುವುವೋ—ಎಂಬಂತೆ ಪ್ರೀತಿ ಯಿಂದಲೂ, ರಭಸದಿಂದಲೂ ಮುದ್ದಿಡುತ್ತವೆ. ಪರಕೀಯರು ಕೂಡ ಮಕ್ಕಳ ಸ್ನೇಹ ಮಮತೆಗಳನ್ನು ಸಂಪಾದಿಸುವುದಕ್ಕೆ ಕಥೆಗಳನ್ನು ಹೇಳು ವುದೇ ಅತ್ಯಂತ ಸುಲಭವಾದ ಮಾರ್ಗ. ಕಥೆಯು ಎಷ್ಟೆಷ್ಟುಮಟ್ಟಿಗೆ

ನಂಬಿಕೆಗೆ ಅನರ್ಹವಾಗಿದ್ದರೆ ಅಷ್ಟುಷ್ಟು ಹೆಚ್ಚಾಗಿ ಮಕ್ಕಳಿಗೆ ಅದರಲ್ಲಿ ಶ್ರದ್ಧೆಯುಂಟು. ಸಿಂಹವು ಮಾತನಾಡಿತೆನ್ನುವುದನ್ನು ಕೇಳಿ ಮಕ್ಕಳು ನಗೆ ಮಲ್ಲಿಗೆಯಿಂದ ಕೂಡಿ ಚಪ್ಪಾಳೆ ಹೊಡೆಯುವುವು. ಗುಬ್ಬಚ್ಚಿಯು ಪಾಯಸ ಮಾಡಿತೆಂದು ಕೇಳಿದಾಗ ಮಕ್ಕಳು ನಾಲಗೆಯನ್ನು ಚಪ್ಪರಿಸಿ ಲಲ್ಲೆ ಮಾಡುವುವು. ಬಂಡೆಯಲ್ಲಿ ಹಣದ ರಾಶಿಯಿದ್ದುದನ್ನೂ, ಕಪ್ಪೆಯು ರಾಜಕುಮಾರನಾದುದನ್ನೂ ಕೇಳಿ ಉಲ್ಲಾಸದಿಂದ ಹಿಗ್ಗುವ ಮಕ್ಕಳನ್ನು ನೋಡಿ, ಮಕ್ಕಳಿಗೆ ಕಥೆ ಹೇಳುವುದೂ ದೇವರ ಸೇವೆಯೆಂದು ಯಾರುತಾನೆ ಭಾವಿಸುವುದಿಲ್ಲ ?

ಎಲ್ಲ ಜನಾಂಗಗಳವರೂ ಉತ್ತಮವಾದ ಕಥೆಗಳನ್ನು ಏರ್ಪಡಿಸಿ ಕೊಂಡಿದ್ದಾರೆ. "ಗ್ರಿಮ್ಸ್ ಫೇರಿ ಟೇಲ್ಸ್", "ಅರೇಬಿಯನ್ ನೈಟ್ಸ್" ಮುಂತಾದ ಕಥೆಗಳೂ, ಪಂಚತಂತ್ರ, ಕಥಾಸರಿತ್ಸಾಗರ, ಮುಂತಾದುವೂ, ಲೋಕಪ್ರಸಿದ್ಧವಾಗಿವೆ. ಉತ್ತಮವಾದ ಕಥೆಗಳನ್ನು ಓದಲು ಮಕ್ಕಳಂತೆಯೇ ದೊಡ್ಡವರಿಗೂ ಸಡಗರವೇ. ಒಂದುರೀತಿಯಲ್ಲಿ ನೋಡಿದರೆ ದೊಡ್ಡವರೂ ವಯಸ್ಸಾದ ಮಕ್ಕಳೇತಾನೆ ? ಇದು ಹೇಗಾದರೂ ಇರಲಿ. ಇಂಗ್ಲೆಂಡ್ ಮುಂತಾದ ದೇಶಗಳಲ್ಲಿ ಮಕ್ಕಳಿಗಾಗಿ ಸೊಗಸಾದ ಕಥೆಗಳನ್ನು ಅಂದವಾಗಿ ಅಚ್ಚು ಹಾಕಿಸಿ, ಮುದ್ದಾಗಿ ರಟ್ಟುಹಾಕಿಸಿ, ಬಹಳವಾಗಿ ಪ್ರಕಟಿಸುತ್ತಿದ್ದಾರೆ. ಮಕ್ಕಳೊಡನೆ ಮಕ್ಕಳಾಗಿ, ಮಕ್ಕಳ ಜೀವನದಲ್ಲಿ ಅಲ್ಲಿಯವರು ಆಸಕ್ತಿಯನ್ನು ತೋರಿಸುವಷ್ಟುಮಟ್ಟಿಗೆ ನಮ್ಮವರು ತೋರಿಸುತ್ತಿಲ್ಲವೆಂದು ವ್ಯಥೆಯಿಂದ ಹೇಳಬೇಕಾಗಿದೆ. ಮಕ್ಕಳಿಗಾಗಿಯೇ ಅಲ್ಲಿ ಪೀಟರ್‌ಪ್ಯಾನ್, ಬ್ಲೂಬರ್ಡ್, ಮುಂತಾದ ನಾಟಕಗಳನ್ನಾಡಿಸಿ ಅಲ್ಲಿಯವರು ಆನಂದ ಪಡುವರಂತೆ. ನಮ್ಮ ದೇಶದಲ್ಲಿ ಅಂತಹ ಕಾಲವು ಬರುವುದೆಂದಿಗೋ ಎನ್ನಿಸುತ್ತದೆ.

ಮಕ್ಕಳಿಗಾಗಿ ಉತ್ತಮವಾದ ಕಥೆಗಳನ್ನು ಅಣಿಮಾಡಿ ಆಸಕ್ತಿಯನ್ನು ಹುಟ್ಟಿಸಿದರೆ, ಅವುಗಳ ಮನಸ್ಸನ್ನು ತಿದ್ದಿ ಶಿಕ್ಷಣ ಕೊಡುವ ಕೆಲ

ವನ್ನು ನೆರವೇರಿಸಬೇಕು. ಈ ಧ್ಯೇಯವನ್ನು ಕಾರ್ಯಕಾರಿಯಾಗುವಂತೆ ಮಾಡಲು ಈ ಪುಸ್ತಕದಿಂದ ಏನಾದರೂ ಸಹಾಯ ದೊರೆತರೆ ಇದರ ಉದ್ದೇಶವು ಸಾರ್ಥಕವಾದಂತಾಯಿತು.

ಸಾಧಾರಣವಾಗಿ ನಿರ್ಬಂಧದಲ್ಲಿ ಸಿಕ್ಕಿ ಬೆಳೆಯುತ್ತಿರುವ ನಮ್ಮ ದೇಶದಮಕ್ಕಳ, ಅದರಲ್ಲಿಯೂ ಬಡ ಹುಡುಗರ ಹೃದಯದಲ್ಲಿ ಹರ್ಷವೆಂಬ ಸೂರ್ಯನು ಬಿಂಬಿಸುವುದು ಅಪೂರ್ವವೆಂದರೆ ಅತಿಶಯೋಕ್ತಿಯಾಗಲಾರದು. ಆಟವು ಮಕ್ಕಳ ಪ್ರಾಣ. ಆಟವೇ ಅವರ ಸುಖ ಸರ್ವಸ್ವವು. ತಮ್ಮ ವಿನಯದಿಂದ ಕೂಡಿದ ನಡೆನುಡಿಗಳಿಂದಲೂ, ಹಸನ್ಮುಖದಿಂದಲೂ, ಆಟಗಳಿಂದಲೂ ನಮ್ಮ ಮರಿಗಳ ಜೀವನದ ಬೆಳಗಿನಲ್ಲಿ ಮೇಘರಹಿತವಾದ ಎಳೆಬಿಸಿಲು ಬೆಳಗುವಂತೆ ಮಾಡಲು ನಮ್ಮ ಶಿಕ್ಷಕ ಸಹೋದರ ವರ್ಗಕ್ಕೆ ದೇವರು ಬುದ್ಧಿಯನ್ನೂ, ಸಹಾಯ ಸಂಪತ್ತನ್ನೂ ಒದಗಿಸಿಕೊಡುವನೆಂದು ದೃಢವಾಗಿ ನಂಬಿರುವೆನು.

---

# ಕಥೆಗಳು

# ಕಥೆಗಳು

—: o :—

## ೧. ಕೃಷ್ಣಮೂರ್ತಿ ಉಪಾಯ

ನಮ್ಮ ಕೃಷ್ಣಮೂರ್ತಿ ಇರುವದು ಮೈಸೂರಲ್ಲಿ. ಅವನು ಬಲು ದೊಡ್ಡ ಹಾಸ್ಯಗಾರ. ಯಾವಾಗಲೂ ಯಾರನ್ನಾದರೂ ನಗಿಸುವುದೇ ಅವನ ಕೆಲಸ. ಒಂದು ದಿನ ಅವನು ಬೆಂಗಳೂರಿಗೆ ಹೋಗಬೇಕಾಯಿತು. ರೈಲು ಸ್ಟೇಷನ್ನಿಗೆ ಬಂದ. ಗಾಡಿ ಬಿಡುವ ಹೊತ್ತು. ಯಾವ ಗಾಡಿ ಹತ್ತಿರ ಹೋದರೂ "ಇಲ್ಲ ಜಾಗ ಇಲ್ಲ, ಮುಂದೆ ಹೋಗಿ" ಅನ್ನೋರೆ. ಗಾಡಿ ಸಿಳ್ಳು ಹಾಕಿತು. ಅವಸರದಿಂದ ಮೂರ್ತಿ ಒಂದು ಗಾಡಿಯ ಬಾಗಿಲ ತೆಗೆದು ಒಳಕ್ಕೆ ನುಗ್ಗಿದ. ಅವತ್ತು ಬೆಂಗಳೂರಿನ ಕರಗಕ್ಕಾಗಿ ಹೊರಟಿರುವ ಜನ ಬಹಳ. ಅನೇಕರಿಗೆ ಕೂತುಕೊಳ್ಳುವುದಕ್ಕೆ ಸ್ಥಳ ಇಲ್ಲದೆ ನಿಂತಿದ್ದಾರೆ. ಕೃಷ್ಣ ಮೂರ್ತಿಯೂ ನಿಂತನು. ಒಂದು ಸ್ಟೇಷನ್ ಆಯಿತು. ಎರಡು ಸ್ಟೇಷನ್ ಆಯಿತು. ಯಾರು ಇಳಿಯಲಿಲ್ಲ. ಎಲ್ಲರ ಮುಖವೂ ಬೆವರುತ್ತಿದೆ. ಮೂರ್ತಿಗೆ ಕೂತುಕೊಳ್ಳಲು ಸ್ಥಳವೇ ದೊರೆಯಲಿಲ್ಲ. ಆಗ ಅವನು ಇದ್ದಕ್ಕಿದ್ದ ಹಾಗೆಯೆ ಎಲ್ಲರ ಸಾಮಾನುಗಳ ಸಂದುಗೊಂದುಗಳನ್ನು ಹುಡುಕಲಾರಂಭಿಸಿ ದನು. ಎಲ್ಲರೂ "ಏನು ಹೋಯಿತು? ಏನು ಕಳೆದುಕೊಂಡಿದ್ದೀರಿ?' ಎನ್ನ ಲಾರಂಭಿಸಿದರು. ಆಗ ಮೂರ್ತಿಯು "ಅಯ್ಯೋ! ಒಂದು ಹಾವನ್ನು ಜೇಬಿನಲ್ಲಿ ಹಾಕಿಕೊಂಡು ಬಂದಿದ್ದೆ. ಅದು ಎಲ್ಲಿ ತಪ್ಪಿಸಿಕೊಂಡಿದೆಯೋ ಎಂದು ನೋಡುತ್ತಿದ್ದೇನೆ" ಎಂದನು. 'ಹಾವು' ಎಂದ ಕೂಡಲೆ ಗಾಡಿ ಯಲ್ಲಿದ್ದವರೆಲ್ಲರೂ "ಹಾವೇ! ಹಾವೇ!! ನೋಡಿರಿ, ಚೆನ್ನಾಗಿ ನೋಡ್ರಿ" ಎಂದು ಕೃಷ್ಣಮೂರ್ತಿ ಇದ್ದ ಭಾಗವನ್ನು ಬಿಟ್ಟು ಬೇರೆಕಡೆ ಹೋಗಿ ನಿಂತರು. ಆಗ ಕೃಷ್ಣಮೂರ್ತಿ ಕೂತುಕೊಂಡು, ಜೇಬಿನಲ್ಲಿ ಕೈಹಾಕಿ, "ಓಹೊ! ಅದು ಇಲ್ಲಿಯೆ ಇದೆ, ಎಲ್ಲೂ ಹೋಗಿಲ್ಲ. ಬನ್ನಿ ಕೂತುಕೊಳ್ಳಿ

ಅದೇನೂ ಮಾಡುವುದಿಲ್ಲ" ಎಂದು ಹೆದರಿ ಬೇರೆ ಕಡೆ ನಿಂತಿದ್ದವರನ್ನು ಕರೆದನು. ಆದರೆ ಅವನ ಹತ್ತಿರ ಬರುವುದಕ್ಕೆ ಎಲ್ಲರಿಗೂ ಹೆದರಿಕೆ. ಆಗ ಮೂರ್ತಿ "ಬನ್ನಿ, ನನ್ನ ಹಾವು ಕಚ್ಚುವುದಿಲ್ಲ" ಎಂದು ಜೇಬಿನಿಂದ ರಬ್ಬರಿನ ಹಾವನ್ನು ತೆಗೆದು ತೋರಿಸಿದನು. ಆಗ ಎಲ್ಲರೂ ಹೊಟ್ಟೆ ಹುಣ್ಣಾಗುವಂತೆ ನಕ್ಕರು. ಮೂರ್ತಿಮೇಲೆ ಸಿಟ್ಟು ಮಾಡುಕೊಳ್ಳುವುದಕ್ಕೆ ಬದಲಾಗಿ, "ಎಂಥಾ ಉಪಾಯಗಾರರು ನೀವು. ಕೂತುಕೊಳ್ಳುವುದಕ್ಕೆ ಸ್ಥಳ ಬೇಕೂ ಅಂತ ಈ ಉಪಾಯ ಮಾಡಿದಿರಾ" ಎಂದು ನಗಲಾರಂಭಿಸಿದರು.

ದ. ಕೃ. ಭಾರದ್ವಾಜ.

## ೨. ಶಾಮು

ಶಾಮು ಒಳ್ಳೆಯ ಹುಡುಗ. ಬುದ್ಧಿಯೂ ಚುರುಕು. ಅವನನ್ನು ಕಂಡರೆ ಎಲ್ಲರಿಗೂ ಪ್ರೀತಿ. ಅವರಣ್ಣ ರಂಗನು ದಡ್ಡ. ಆದರೂ ಅವನಿಗೆ ಜಂಭ. ಹಾಗೆ ಜಂಭ ಪಡಬಾರದೆಂದೂ, ಚೆನ್ನಾಗಿ ಓದಬೇಕೆಂದೂ ಅವನ ತಂದೆ ರಾಮಣ್ಣನವರು ಹೇಳಿದರು. ಅವನು "ಶಾಮು ದಡ್ಡ. ನಾನೆ ಜಾಣ" ಎಂದು ಅವರಿಗೆ ಹೇಳಿದನು. ಅವರು ಬಹಳ ನಕ್ಕು "ಆಗಲಪ್ಪ ನಾನು ಒಂದು ಕೆಲಸ ಹೇಳುತ್ತೇನೆ. ನೀನು ಮಾಡಿದರೆ ನೀನು ಜಾಣ. ಶಾಮು ಮಾಡಿದರೆ ಶಾಮು ಜಾಣ. ಇಬ್ಬರೂ ಮಾಡಿದರೆ ಇಬ್ಬರೂ ಜಾಣರು" ಎಂದರು.

ರಂಗನಿಗೆ ಅದನ್ನು ಕೇಳಿ ಬಹಳ ಸಂತೋಷವಾಯಿತು. ಬೇಗ ಆ ಕೆಲಸ ಮಾಡಿ ಜಾಣನೆಂದು ಹೊಗಳಿಸಿಕೊಳ್ಳಬೇಕು ಎಂದುಕೊಂಡನು. ರಾಮಣ್ಣನವರು ಅವನಿಗೆ ಮೂರು ಆಣೆಗಳನ್ನು ಕೊಟ್ಟು "ಇಕೋ! ಮೂರು ಆಣೆ ಇದೆ. ನಿನಗೆ ತೋರಿದಂತೆ ವೆಚ್ಚಮಾಡು. ಯಾವುದಾದರೂ ಸಾಮಾನಿನಿಂದ ನಮ್ಮ ಮನೆಯೆಲ್ಲಾ ತುಂಬುವಹಾಗೆ ಮಾಡು" ಎಂದರು. ರಂಗನು ಮನೆಯ ಆಳನ್ನೂ ಸಂಗಡ ಕರೆದುಕೊಂಡು ಕುಣಿಯುತ್ತಾ ಪೇಟೆಗೆ

ಹೋದನು. ಎಲ್ಲಾ ಕಡೆಗೂ ಹೋಗಿ ವಿಚಾರಿಸಿದನು. ಅವನಲ್ಲಿದ್ದ ದುಡ್ಡಿಗೆ ಹುಲ್ಲಿನಷ್ಟು ಹೆಚ್ಚಾಗಿ ಇನ್ನೇನೂ ಬರುವುದಿಲ್ಲವೆಂದು ಗೊತ್ತಾಯಿತು. ಅವನು ಮೂರು ಆಣೆಗೂ ಅದನ್ನು ಕೊಂಡುಕೊಂಡು ಹೊರಿಸಿಕೊಂಡು ಬಂದನು. ಆದರೇನು? ಮನೆಯಲ್ಲಿ ಒಂದು ಕೊಠಡಿಯನ್ನು ತುಂಬು ವುದಕ್ಕೂ ಆ ಹುಲ್ಲು ಸಾಲಲಿಲ್ಲ. ರಂಗನ ಮುಖವು ಪೆಚ್ಚಾಯಿತು. ಅಳು ಬಂದಿತು. ಬಿಕ್ಕಿ ಬಿಕ್ಕಿ ಅತ್ತುಬಿಟ್ಟನು.

ಆ ಬಳಿಕ ಶಾಮು ಸರದಿ ಬಂದಿತು. ಅವರ ತಂದೆ ಅವನಿಗೂ ಮೂರು ಆಣೆ ಕೊಟ್ಟರು. ಅವನೂ ಬಹಳ ಹೊತ್ತು ಯೋಚನೆ ಮಾಡಿ, ಆ ಮೇಲೆ ಪೇಟೆಗೆ ಹೋಗಿ ಮೂರು ಆಣೆಗೂ ಚಿಕ್ಕ ಚಿಕ್ಕ ಮೇಣದ ಬತ್ತಿಗಳನ್ನು ತಂದನು. ಅವನು ಮನೆಗೆ ಬರುವ ವೇಳೆಗೆ ಹೊತ್ತು ಮುಳುಗಿ ಆಗತಾನೆ ಕತ್ತಲೆಯಾಗಿತ್ತು. ಶಾಮು ಮೇಣದಬತ್ತಿ ಹೊತ್ತಿಸಿಟ್ಟು "ಇಗೋ ಮನೆ ಯನ್ನೆಲ್ಲಾ ಬೆಳಕಿನಿಂದ ತುಂಬಿದೆ" ಎಂದನು ರಾಮಣ್ಣನವರು ಅವನನ್ನು ತಬ್ಬಿಕೊಂಡು, "ನೀನು ಮನೆಯ ಬೆಳಕು, ಮಗು," ಎಂದರು.

ರಂಗನು ದಡ್ಡನಾದರೂ ಕೆಟ್ಟವನಲ್ಲ. ಅವನು "ಶಾಮು! ನನಗೆ ಇದು ತೋರಲೇ ಇಲ್ಲವಲ್ಲೋ! ನಾನು ಸೋತೆ; ನೀನೇ ಜಾಣ" ಎಂದನು. ಅವನು ಆ ದಿನದಿಂದ ಜಂಭ ಮಾಡಲಿಲ್ಲ.

ಸಿ. ಕೆ. ವೆಂಕಟರಾಮಯ್ಯ.

## ೩. ಸಾಲಾ ತಂದ ನರಿ

ಒಂದೂರಲ್ಲಿ ಒಂದು ನರಿ. ಅದು ಒಂದು ದಿವಸ ಸಾಲ ತಂತು. ಯಾರೂವಲ್ಲದೆ ಭೂಮಿ ಕೈಲಿ. ಮೂರೇ ಮೂರು ಕಾಸು.

ಮೂರು ದೀವಳಿಗೆ, ಮೂರು ಗಣಪತಿ ಬಂದು, ನಿಂತು ಹೋದವು. ನರಿ ಕೈ ಬರಿ ಆಯ್ತು. ಸಾಲ ಮರೀತು.

ಒಂದು ದಿನ ಭೂಮಿದೇವಿ "ಕಾಸು ಕೊಡುವಿಯಾ? ಸರಿಯಣ್ಣಾ" ಎಂತು. ನರಿ ಹೆದರಿತು, ಬೆದರಿತು, ಓಡಿತು. ಎಲ್ಲಿ ಹೋಗಿ ನಿಂತರೂ ಭೂಮಿ ಕೇಳುವುದನ್ನು ಬಿಡಲಿಲ್ಲ. ನರಿ ಹೆದರಿತು, ಬೆದರಿತು, ಓಡಿತು. ಭೂಮಿ ಕೇಳಿಯೇ ಕೇಳಿತು.

ಗೂಳಿದೇಶ, ಹದ್ದಿನದೇಶ, ಕರಡಿದೇಶ, ಸಿಂಹದದೇಶ— ಎಲ್ಲೆಲ್ಲೋ ಹೋಯ್ತು. ಭೂದೇವಿ ಹಟಮಾಡಿದಳು. "ಕೊಡು ಸನ್ಯಾಸ."

•ವಾಯಿದೆ ಮೀರಿತು. ಭೂಮಿ ಕೇಳಿತು. ನರಿ ಓಡಿತು, ಹಳ್ಳ ಬಿತ್ತು, ಕೊಳ್ಳ ಬಿತ್ತು, ನದಿ ದಾಟಿತು, ನರಿ. ಸಮುದ್ರ ಈಜಿತು, ನರಿ. ಭೂಮಿ ಕೇಳಿತು "ಕೊಡು ಸನ್ಯಾಸ."

ನರಿ ಓಡ್ತು, ಕೊರಕಲ ಬಿತ್ತು, ಎರಕಲ ಏರ್ತು, ಗಿಡ ಹಾರ್ತು, ಮರ ಹತ್ತಿ ಮೇಲೆ ನೆಗೀತು, ದೇಗಿತು, ಬೆದರಿತು, ಸೋರುವ ರಕ್ತ ನೆಕ್ಕಿ ಕೊಂಡಿತು. "ಗೆದ್ದೆ" ಎಂತು. ಅಷ್ಟರಲ್ಲೇ ಬಂತು ಗುಡುಗುಡು ಗುಡಾರೆಂತ ಶಬ್ದ, ಭೂಮಿದೇವೀದು—"ನರೀ! ಕೊಡೂ ಸನ್ಯಾಸೂ."

ನರಿ ನೆಗೀತು, ನಾಗಾಲೋಟ ಹಿಡೀತು. ಕಾಡಕಿಚ್ಚು ದೂರಿ, ಬಿರುಗಾಳಿ ಬೀರಿ, ಮಂಜೆಲ್ಲ ತೂರಿ, ಹೋಯಿತು, ಹೋಯಿತೂ, ಹೋಯಿತೂೂೂ, ದಕ್ಷಿಣ ಧ್ರುವಕ್ಕೆ ಹೋಯಿತು. ಮಂಜಿನ ಬೆಟ್ಟ ಹತ್ತಿತು, ತುಟ್ಟತುದಿ ಬೆಟ್ಟದ ಕೋಡಲ್ಲಿ ಬಿದ್ದುಕೊಂಡಿತು. "ಹಾಳು ಭೂಮಿ, ಇಲ್ಲೆಲ್ಲಿ ಬರುತ್ತೆ?" ಎಂದುಕೊಂಡಿತು. ಮೂಗಿನ ಹೊಳ್ಳೆ ಒಡೆಯುವ ಹಾಗೆ, ಹೊಟ್ಟೆ ಅಳ್ಳೆ ಬಡಿಯುವ ಹಾಗೆ, ದೊಡ್ಡದೊಂದು ನಿಟ್ಟುಸಿರು ಬಿಟ್ಟೇ ಬಿಟ್ಟಿತು.

ಅಷ್ಟು ಹೊತ್ತಿಗೆ ಏನೋ ಎಂತೋ ಬುಸ್ಸೆಂತು, ಭಗಾರೆಂತು. ಬೆಟ್ಟಾ ಬಿರೀತು. ಬಾಯಿ ತೆರೀತು. ನರಿ ಮೈಯೆಲ್ಲಾ ಹುಣ್ಣಾಗಿತ್ತು.

ಹಣ್ಣಾಗಿತ್ತು. ಕಣ್ಣು ಬಿಟ್ಟಿತು ನರಿ. ಬಾಯಿ ಕಳೀತು ನರಿ. "ಯಾರೋ ನೀನು" ಎಂತು ನರಿ. ಭೂಮಿ ಅಂತು "ಕೊಡು ನನ್ನ ಕಾಸು."

ಸಿಟ್ಟು ಬಂತು ನರೀಗೆ. ಬಲು ರೇಗಿತು. ಕಣ್ಣು ಕೆಂಪಗೆ ಮಾಡಿತು. ಮೀಸೆ ಹುರಿಮಾಡಿತು. ಧೈರ್ಯ ಮಾಡಿತು. ಹೇಳಿತು ಭೂಮಿದೇವಿಗೆ, "ಯಾರಿಗೆ ಕೊಟ್ಟಿದ್ದೆಯೇ ಕಾಸ? ಹುಣ್ಣಾಗಿ, ಹಣ್ಣಾಗಿ, ಹೆಣವಾದ ಈ ನರೀಗೆ ನೀನು ಸಾಲ ಕೊಟ್ಟಿದ್ದು?"

ಭೂಮಿ ನಡುಗಿತು, "ನರಿ ಧೈರ್ಯ ನೋಡಿ" ಎಂತು.

"ಮಗೂ—ಕಂಡಿದ್ದೆಯ?
ಆ ನರೀನ, ಭಂಡ ನರೀನ?
ಸಾಲ ತಂದ ನರೀನ—ಮೈಸೂರು ಪೇಟೇಲಿ?"

ಶ್ರೀ ಹೊಯ್ಸಳ.

## ೪. ಹಕ್ಕಿಯ ಶಾಲೆ

ಪೂರ್ವಕಾಲದಲ್ಲಿ ಪಕ್ಷಿಗಳೆಲ್ಲಾ ಸೇರಿ ಒಂದು ಪಾಠಶಾಲೆಯನ್ನು ಏರ್ಪಡಿಸಿಕೊಂಡು ಪಕ್ಷಿರಾಜನಾದ ಗರುಡನನ್ನು ಉಪಾಧ್ಯಾಯನನ್ನಾಗಿ ಮಾಡಿಕೊಂಡು ವಿದ್ಯವನ್ನು ಕಲಿಯುತ್ತಿದ್ದವು. ಗರುಡನು ಎಲ್ಲಾ ಶಿಷ್ಯರಲ್ಲಿಯೂ ಒಂದೇ ಸಮನಾದ ವಿಶ್ವಾಸವನ್ನು ಇಟ್ಟುಕೊಂಡು ನಿಷ್ಪಕ್ಷಪಾತದಿಂದ ಪಾಠವನ್ನು ಹೇಳುತ್ತಲಿದ್ದನು.

ಹೀಗೆಯೇ ಕೆಲವು ಕಾಲ ಕಳೆಯಿತು. ಅನಂತರ ಶ್ರೀಮಹಾವಿಷ್ಣುವು ಗರುಡನ ನಿಷ್ಪಕ್ಷಪಾತವನ್ನೂ ಸಾಹಸವನ್ನೂ ನೋಡಿ ತನಗೆ ವಾಹನವನ್ನಾಗಿ ಮಾಡಿಕೊಂಡು ತನ್ನಲ್ಲಿ ಇರಿಸಿಕೊಂಡನು. ಆದುದರಿಂದ ಗರುಡನಿಗೆ ಪಾಠ ಹೇಳುವುದಕ್ಕೆ ಪುರಸತ್ತಾಗಲಿಲ್ಲ. ಸೋಮಾರಿಯಾದ ಕೋಗಿಲೆಯು ಯಾವಾಗಲೂ ಹಾಡುತ್ತಲೇ ಇದ್ದು ಹೊಟ್ಟೆಯನ್ನು

ತ್ತದೆಯೋ ಅವನು ಹೊರಗೆ ಬರಬೇಕು. ಹೀಗೆ ಒಬ್ಬೊಬ್ಬರು ಕಮ್ಮಿಯಾದ ಹಾಗೆಲ್ಲಾ ಆಟವು ತೀಕ್ಷ್ಣವಾಗುವುದು. ಕಡೆಯಲ್ಲಿ ಒಬ್ಬನು ಉಳಿಯುವ ತನಕ ಆಡಬಹುದು.

## ೧೪. ದೋಣಿ ಚೆಂಡು

ಆಟಗಾರರೆಲ್ಲರೂ ತಮ್ಮ ತಮ್ಮ ಪಂಗಡಗಳಲ್ಲಿ ಒಬ್ಬರ ಹಿಂದೆ ಒಬ್ಬರಂತೆ ಮೂರು ಮೂರು ಅಡಿಗಳ ಅಂತರದಲ್ಲಿ ಕಾಲುಗಳನ್ನು ಅಗಲಿಸಿ ನಿಲ್ಲಬೇಕು. ಮೊದಲನೆಯ ಆಟಗಾರನ ಕಾಲುಗಳ ಮಧ್ಯೆ ನೆಲದ ಮೇಲೆ ಒಂದು ಕಾಲ್ಚೆಂಡು ಇರಬೇಕು. ಶೀಟಿಯನ್ನು ಊದಿದ ಕೂಡಲೆ ಅವನು ಒಗ್ಗಿ ತನ್ನ ಕೈಗಳಿಂದ ಆ ಚೆಂಡನ್ನು ಎರಡನೆಯವನಿಗೆ ನೂಕಬೇಕು. ಹೀಗೆಯೇ ಅದು ಒಬ್ಬರಿಂದೊಬ್ಬರಿಗೆ ಕಡೆಯವನ ತನಕ ಹೋಗಬೇಕು. ಆಗ ಕಡೆಯವನು ಅದನ್ನು ಕೈಗಳಲ್ಲಿ ತೆಗೆದುಕೊಂಡು ಒಂದು ಪಂಗಡದ ಮುಂದೆ ನಿಂತುಕೊಂಡು ಮತ್ತೆ ಮೊದಲಿನಂತೆ ತನ್ನ ಕಾಲುಗಳ ಮಧ್ಯೆ ನೂಕಬೇಕು. ಹೀಗೆ ಆಟಗಾರರೆಲ್ಲರಿಗೂ ಸರ್ತಿ ಬಂದು ಯಾವ ಪಂಗಡವು ಮೊದಲು ಮುಗಿಸುವುದೋ ಅದೇ ಗದ್ದಂತೆ.

## ೧೫. ಸುರಂಗ

ಆಟಗಾರರನ್ನೆಲ್ಲಾ ಎಂಟೆಂಟು ಹುಡುಗರಿರುವ ಪಂಗಡಗಳಾಗಿ ವಿಂಗಡಿಸಬೇಕು. ಆ ಮೇಲೆ ಪ್ರತಿಪಂಗಡದವರಲ್ಲಿ ನಾಲ್ಕು ಹುಡುಗರನ್ನು ಸಾಲಾಗಿಯೂ, ಉಳಿದ ನಾಲ್ವರನ್ನು ಅವರಿಗೆ ಎದುರಾಗಿಯೂ ನಿಲ್ಲಿಸಬೇಕು. ಅಂದರೆ ಒಬ್ಬರ ಎದುರಿಗೆ ಒಬ್ಬರಂತೆ ನಾಲ್ಕು ಜೊತೆಗಳಿದ್ದಂತಾಯಿತು. ಪ್ರತಿ ಜೊತೆಯವರೂ ತಮ್ಮ ಕೈಗಳನ್ನು ಮೇಲಕ್ಕೆ ಎತ್ತಿ ಎದುರಾಳಿಯ ಕೈಗಳನ್ನು ಹಿಡಿದುಕೊಳ್ಳಬೇಕು. ಇದೇ ಸುರಂಗ. ಎಲ್ಲಾ ಸುರಂಗಗಳೂ ಒಂದೇ ಸಾಲಿನಲ್ಲಿರಬೇಕು. ನಾಯಕನು ಪ್ರತಿಯೊಂದು ಸುರಂಗದ

ಮೇಲೆ ಹೊಟ್ಟೆಕಿಚ್ಚು ಪಡುತ್ತ ಅದನ್ನು ಹಿಂಸೆ ಮಾಡುತ್ತ ಹದ್ದಿನ ಸಂಗಡ ಇಲ್ಲದ ಚಾಡಿಯನ್ನು ಹೇಳುತ್ತ ಪಾರಿವಾಳವನ್ನು ಪೀಡಿಸುತ್ತಿತ್ತು.

ಒಂದು ದಿನ ಹದ್ದು ಪಾರಿವಾಳವನ್ನು ಕರೆದು ನನ್ನ ಮರಿಗಳಿಗೆ ತಿನ್ನುವುದಕ್ಕೆ ಚಿಕ್ಕಚಿಕ್ಕ ಹಕ್ಕಿಗಳ ಮರಿಗಳನ್ನು ತಂದುಕೊಡು ಎಂದು ಹೇಳಿತು. ಪಾರಿವಾಳವು "ತಾಯಿ ಮಕ್ಕಳಿಗೆ ಅಗಲಿಸಬಾರದು. ಅದೂ ಅಲ್ಲದೆ ನಾನು ಪ್ರಾಣಿಹಿಂಸೆಯನ್ನು ಮಾಡುವುದಿಲ್ಲ" ವೆಂದು ಹೇಳಿತು. ಕಾಗೆಯ ಚಾಡೀಮಾತಿನಿಂದ ಹದ್ದಿಗೆ ಪಾರಿವಾಳದ ಮೇಲೆ ಮೊದಲೇ ರೇಗಿತ್ತು. ಈಗ ಈ ಮಾತನ್ನು ಕೇಳಿದ ಕೂಡಲೇ ಇನ್ನೂ ರೇಗಿ, "ನನ್ನ ಮಾತಿಗೆ ಎದುರು ಮಾತಾಡುತ್ತೀಯಾ? ಇನ್ನು ಮೇಲೆ ನಮಗೂ ನಿಮಗೂ ವೈರವು ಸಿದ್ಧ. ನೀನು ಇಲ್ಲಿಗೆ ಬರಬೇಡ" ವೆಂದು ಓಡಿಸಿ ಬಿಟ್ಟಿತು. ಅಂದಿ ನಿಂದಲೂ ಹದ್ದುಗಳು ಪಾರಿವಾಳವನ್ನು ಕಂಡರೆ ಅಟ್ಟಿಸಿಕೊಂಡು ಹೋಗಿ ಮೇಲೆ ಬಿದ್ದು ಕೊಲ್ಲುವವು.

ಬಿ. ಪುಟ್ಟಮ್ಮ.

# ೫. ಪದವಿಗಾಗಿ ಪಶುಗಳ ಸ್ಪರ್ಧೆ

(ಲೆಸಿಂಗನ ಕಥಾವಳಿಯಿಂದ)

**ಒಂದು ವ್ಯಂಗ್ಯಕಥೆ.**

೧

ಪಶುಗಳಲ್ಲಿ ಒಮ್ಮೆ ಒಂದು ದೊಡ್ಡ ತಂಟೆಯು ಎದ್ದಿತು? ಯಾರಿಗಿಂತ ಯಾರಿಗೆ ಮೊದಲ ಮಾನಸಿಗಬೇಕೆಂದು. ಕುದುರೆ ಅಂದಿತು "ನಾನು ಅನ್ನು ವುದೆಂದರೆ ಈ ನ್ಯಾಯವನ್ನು ತೀರಿಸಲಿಕ್ಕೆ ನಾವು ಮನುಷ್ಯನನ್ನು ಕರೆಯ ಬೇಕು; ಅವನು ತಂಟೆಗಾರರಲ್ಲಿ ಒಬ್ಬನಲ್ಲದ್ದರಿಂದ ಹೆಚ್ಚು ಸಮ ತೂಕದಿಂದ ನಡೆಯುವನು."

" ಆದರೆ ಅದಕ್ಕೆ ಅವನಿಗೆ ಸಾಕಾಗುವಷ್ಟು ಸಮ ತೂಕವಿರುವುದೇ? " ಎಂದು ಚಿಟ್ಟಿಲಿಯು ಕೇಳಿತು. " ನಮ್ಮೆಲ್ಲರ ಒಳಿೊಳಗಿನ ಗುಣಗಳನ್ನು ಕಂಡು ಹಿಡಿಯಬೇಕಾದರೆ ಆ ತಿಳುವಳಿಕೆಯು ಬಹಳ ಚುರುಕಾಗಿರ ಬೇಕೆಂದು ನನಗೆ ತೋರುತ್ತದೆ. "

" ಇದು ಒಳ್ಳೇ ಯೋಚನೆ !" ಎಂದಿತು ಮೊಲವು

" ನಿಸ್ಸಂಶಯವಾಗಿ ! " ಎಂದು ಕೂಗಿತು ಮುಳ್ಳುಹಂದಿ. " ಈ ಕೆಲಸಕ್ಕೆ ಬೇಕಾಗುವಷ್ಟು ಚುರುಕುತನವು ಮನುಷ್ಯನಲ್ಲಿ ಇರುವುದೆಂದು ನಾನೆಂದೂ ನಂಬಲಾರೆ. "

" ಸದ್ದು !" ಕುದುರೆಯು ಅಬ್ಬರಿಸಿತು. " ನಮಗೆ ಚೆನ್ನಾಗಿ ಗೊತ್ತಿದೆ, ತನ್ನ ಪಂಥದ ಗುಣಗಳ ಮೇಲೆ ಯಾವದು ಕಡಿಮೆ ವಿಶ್ವಾಸವೋ ಅವನೇ ತನ್ನ ಪಂಚನ ಜಾಣತನವನ್ನು ಕವಡಿ ಬೆಲೆ ಮಾಡಲಿಕ್ಕೆ ಯಾವಾಗಲೂ ಮುಂದಾ ಗುತ್ತಾನೆ. "

೨

ಅಂತು ಮನುಷ್ಯನು ಪಂಚನೆಂದು ಮಾಡಿದರು. ಬೆಡಗಿನ ಸಿಂಹವು ಅವನಿಗೆ ಅಂದಿತು, " ನೀನು ತೀರ್ಪನ್ನು ಒದರಿಕೊಳ್ಳುವ ಮೊದಲು ನಿನ ಗೊಂದು ಮಾತು ! ನಮ್ಮ ಹೆಚ್ಚು ಕಡಿಮೆ ಗುಣವನ್ನು ಯಾವ ಒರೆ ಯಿಂದ ನೀನು ಗೊತ್ತು ಮಾಡಬೇಕೆಂದಿರುವೀ ?"

" ಯಾವ ಒರೆಯಿಂದ ? ಸಂಶಯವೇಕೆ ? " ಮನುಷ್ಯನು ಉತ್ತರ ಕೊಟ್ಟನು "ನೀನು ನಮಗೆ ಎಷ್ಟೆಷ್ಟು ಬಾರಿಗೆ ಬರುವಿರೋ ಅದರ ಮೇಲಿಂದ."

" ಬಹಳ ಒಳಿತು !" ನೊಂದುಕೊಂಡು ಸಿಂಹವು ಇದುರಾಡಿತು. " ಹಾಗಾದರೆ ಕತ್ತೆಗಿಂತ ಎಷ್ಟು ಕೆಳಗಿನ ಪದವಿಯಲ್ಲಿ ನಾನು ನಿಲ್ಲಬೇಕಾ ದೀತಲ್ಲ ! ಮನುಷ್ಯನೇ ! ನಮ್ಮ ಸಲುವಾಗಿ ನೀನು ಪಂಚಾಯತಿ ಮಾಡ ಲಾರೆ. ಸಭೆಯನ್ನು ಬಿಟ್ಟು ನಡೆ !"

೩

ಮನುಷ್ಯನು ಕಾಲ್ತೆಗೆದನು. ಮೊಲವೂ ಮುಳ್ಳು ಹಂದಿಯೂ ದನಿಗೂಡಿಸಲು ಚಿರಡಿದ ಚಿಟ್ಟೆಲಿ ಎಂದಿತು "ನೋಡಿದಿರಾ ಈಗ ಕುದುರೆ ದೊರೆಗಳೇ! ಮನುಷ್ಯನು ನಮ್ಮ ಪಂಚನಾಗಲಿಕ್ಕೆ ತಕ್ಕವನಲ್ಲವೆಂದು ಸಿಂಹವು ಕೂಡ ತಿಳಿಯುತ್ತದೆ. ಸಿಂಹವು ನಮ್ಮಂತೇ ತಿಳಿಯುತ್ತದೆ."

ಅವನ ಕಡೆಗೆ ಕೆಟ್ಟಗಣ್ಣಿನಿಂದ ನೋಡಿ ಸಿಂಹವು ಅಂದಿತು "ಆದರೆ ನಿಮಗಿಂತ ಬೇರೆ ಬಲವಾದ ಕಾರಣಗಳಮೇಲಿಂದ ನಾನು ಹಾಗೆ ತಿಳಿಯುತ್ತೇನೆ."

೪

ಸಿಂಹವು ಮುಂದೆ ನುಡಿಯಿತು "ಮೊದಲ ಮಾನಕ್ಕಾಗಿ ನಡೆದಿರುವ ಈ ತಂಟೆಯು,—ನಾನು ಎಲ್ಲ ಸಂಗತಿಗಳನ್ನು ವಿಚಾರಮಾಡಿ ಹೇಳುತ್ತೇನೆ— ಇದು ಸುಮ್ಮನೆ ಒಂದು ಹೊತ್ತು ಹಾಳು! ನೀವು ನನ್ನನ್ನು ಹೆಚ್ಚಿನವನೆಂದು ತಿಳಿಯುವಿರೋ ಅಥವಾ ಕಡಿಮೆಯವನೆಂದು ತಿಳಿಯುವಿರೋ ಅದು ನನಗೇನೂ ಬಾಧಿಸಬೇಕಾಗಿಲ್ಲ. ನನ್ನ ಶಕ್ತಿಯು ನನಗೆ ಗೊತ್ತದೆ, ಇಷ್ಟು ಸಾಕು" ಹೀಗೆ ಮಾತಾಡುತ್ತ ಅವನು ಸಭೆಯಿಂದ ಎದ್ದು ಹೋದನು.

ಅವನ ಬೆನ್ನ ಹಿಂದೆ ಜಾಣ ಆನೆಯೂ, ಗಂಭೀರ ಹುಲಿಯೂ, ಗಂಭೀರ ಕರಡಿಯೂ, ಕಳ್ಳ ನರಿಯೂ, ಉದಾರ ಕುದುರೆಯೂ ಹೊರಟು ಹೋದರು. ಸ್ವಲ್ಪದರಲ್ಲಿ ಹೇಳುವುದೆಂದರೆ ತಮ್ಮ ಬೆಲೆಯನ್ನು ತಾವೇ ತಿಳಕೊಂಡವರು ಅಥವಾ ತಿಳಕೊಂಡಂತೆ ತಿಳಿದವರೆಲ್ಲರೂ ಎದ್ದರು.

ಸಭೆಯು ಮುರಿದದ್ದಕ್ಕೆ ಬಹಳಷ್ಟು ಗೊಣಗುಟ್ಟುತ್ತ ಕಡೆಗೆ ಹೋದವರೆಂದರೆ ಒಂದು ಕೋತಿ, ಇನ್ನೊಂದು ಕತ್ತೆ.

'ಜಯ ಕರ್ನಾಟಕ'

## ೬. ನರಿಯು ಸಕಲಾತಿಯನ್ನು ಬಯಸಿತ್ತಂತೆ !

ಒಂದು ಕಾಡಿನಲ್ಲಿ ಒಂದು ನರಿಯಿತ್ತಂತೆ. ಕಾಡಿನ ಹತ್ತಿರವೇ ಹುಲುಸಾಗಿ ಬೆಳೆದ ಒಂದು ಕಬ್ಬಿನ ಗದ್ದೆಯಿದ್ದುದರಿಂದ ಬಹು ಸುಖವಾಗಿ ಕಾಲವನ್ನು ಕಳೆಯುತ್ತಿತ್ತಂತೆ. ಹೀಗಿರುವಾಗ ಒಂದು ಸಮಯ ಹಿಮ ಕಾಲ ಬಂದು ತನ್ನ ಹೊಟ್ಟೆಕಿಚ್ಚನ್ನೆಲ್ಲಾ ಈಗಲೇ ತೀರಿಸಿಬಿಡಬೇಕು ಎಂದಿರುವಹಾಗೆ ಛಳಿಯನ್ನು ಬೀರುತ್ತಾ ಓಡಾಡುತ್ತಿತ್ತು. ಈ ಛಳಿಯಲ್ಲೇ ನಡುಗುತ್ತಾ ಬಂದು, ಹೊಟ್ಟೆ ಬಿರಿಯ ಕಬ್ಬನ್ನು ಜಗಿದು ತಿಂದು, ಕಬ್ಬಿನ ಗರಿಗಳಿಂದಲೇ ಬೆಂಕಿಯನ್ನು ಮಾಡಿ, ಕಾಯಿಸುತ್ತಾ 'ಹಾ' ಯೆಂದು ಕುಳಿತಿರುವಾಗ ನರಿಯು ಹೀಗೆಂದು ಆಲೋಚನೆಗೆ ಪ್ರಾರಂಭ ಮಾಡಿತಂತೆ.

"ಇದೆಷ್ಟು ದಿವಸ, ಹೀಗೆ ಛಳಿಯಲ್ಲಿ ನಡುಗುವುದು ! ಇದೆಲ್ಲಾ ಸರಿಹೋಗಲಿಕ್ಕಿಲ್ಲ ! ನಾಳೆಯೇ ಪೇಟೆಗೆ ಹೋಗಿ, ಒಂದು ಇಪ್ಪತ್ತೆರಡು ರೂಪಾಯಿನ ಸಕಲಾತಿಯನ್ನು ತಂದುಬಿಡಬೇಕು. ದುಡ್ಡೇನೊ ಈಗಿಲ್ಲ ; ಸರಿ, ಆದರೇನು ? ಸಾಹುಕಾರರಲ್ಲಿ ಸಾಲ ತೆಗೆದುಬಿಡುವದು. ಬಡ್ಡಿ ಸ್ವಲ್ಪ ಹೆಚ್ಚಾಗಿ ಕೇಳಬಹುದು. ಮಾಡುವ್ರುದೇನು ? ಕೊಟ್ಟುಬಿಡುವುದು. ಸಕಲಾತಿಯನ್ನು ಬೆಚ್ಚಗೆ ಹೊದ್ದು ಕೂತು, ಬೆಂಕಿಯನ್ನು ಕಾಯಿಸಿದರೆ, ಹಾ ! ಎಷ್ಟು ಆನಂದವಾಗಬೇಕು ! ಅದರ ಮುಂದೆ ಈ ದುಡ್ಡಿನ ಕಷ್ಟವೇ? ಬದುಕಿರುವಾಗ ಸುಖಪಡದೆ, ಮತ್ತಿನ್ನ್ಯಾವಾಗ ? ಸತ್ತು ಮಣ್ಣಾದಮೇಲೆ ನಮ್ಮನ್ನು ಯಾರು ಕೇಳಬೇಕು ? ಈ ಸಾಲವನ್ನು ನಾನಲ್ಲದಿದ್ದರೆ, ನನ್ನ ಮಕ್ಕಳ ಕಾಲಕ್ಕಾದರೂ, ಅಲ್ಲವೆ ನನ್ನ ಮರಿಮಕ್ಕಳ ಕಾಲಕ್ಕಾದರೂ ತೀರಿಸುವರು. ನಾಳೆಯೇ ಬೆಳಗಾಗಿ ಎದ್ದಕೂಡಲೇ ಬಿಸಿಬಿಸಿ ಎರಡು ಲೋಟ ಕಾಫಿ ಕುಡಿದು, ಪೇಟೆಗೆ ಹೊರಟುಬಿಡುವುದು" ಎಂದು ನಿಶ್ಚಯ ಮಾಡಿಕೊಂಡಿತಂತೆ.

ಹೀಗೆ ನಿಶ್ಚಯ ಮಾಡಿಕೊಂಡು ನರಿಯು ತನ್ನ ಬಿಲಕ್ಕೆ ಹೋಗಿ ಒಂದು ಮೂಲೆಯನ್ನು ಹುಡುಕಿ ಅಲ್ಲಿಯೇ ಮುದುರಿಕೊಂಡು ಹಾಗೂ ಹೀಗೂ ರಾತ್ರಿಯನ್ನು ಕಳೆಯುತ್ತಾ, ಹತ್ತಿರದಲ್ಲೇ ಇದ್ದ ಚರ್ಚಿನ ಗಂಟೆಯ ಸದ್ದನ್ನು ಕೇಳಿ, ಬೆಳಗಾಯಿತೆಂದು ನಿಶ್ಚಯಮಾಡಿಕೊಂಡು ಹಾರಿ ಎದ್ದು, ಬಿಸಿನೀರನ್ನು ಕಾಸಿ, ಮುಖ ತೊಳೆದು, ಹಲ್ಲುಜ್ಜಿ, ಬಾಲ, ಮೈಯಿ, ಕಾಲು, ಕಿವಿಗಳನ್ನು ಚೆನ್ನಾಗಿ ತಿಕ್ಕಿ ಒರಸಿ, ಪೇಟೆಗೆ ಹೊರಡಲು ಸಿದ್ಧಮಾಡಿಕೊಂಡು, ಸೂರ್ಯನ ಬರವನ್ನೇ ಕಾಯುತ್ತಾ ಬಿಲದ ಬಾಗಿಲಿನಲ್ಲಿ ಕೂತಿತಂತೆ. ಸ್ವಲ್ಪದೂರದಲ್ಲೇ ಸೂರ್ಯನು ಮೂಡಿ, ಸುತ್ತಲೂ ಹಾರ್ಯಾಡುತ್ತಿದ್ದ ಮಂಜನ್ನು ಹೊಡೆದೋಡಿಸಿ, ಕೆಂಪಗಿರುವ ಕಿರಣವನ್ನು ಸುತ್ತಲೂ ಬೀರಿ, ಹಾಗೆಯೇ ಮೇಲಕ್ಕೆ ಬರಬರುತ್ತಾ ಬಿಸಿಲಿನ ತಾಪವನ್ನು ಸ್ವಲ್ಪ ಸ್ವಲ್ಪವಾಗಿ ಹೆಚ್ಚಿಸುತ್ತಾ ಹೋದನು. ಕಾದು ಕುಳಿತಿದ್ದ ನರಿಗೆ ಬಿಸಿಲಿನ ಸೊಗಸು ಅರ್ಥವಾದಂತೆ ಕಂಡಿತು. ಹಾಗೆಯೇ ಕಾಲುಗಳನ್ನು ನೀಡಿ, ಬಾಲವನ್ನು ಬಡಿಯುತ್ತಾ, ಮುಸುಡಿಯನ್ನು ನೀಡಿದ ಕಾಲುಗಳ ಮೇಲಿಟ್ಟು, ಆನಂದದಲ್ಲಿ ಅರೆಗಣ್ಣನ್ನು ಮುಚ್ಚಿ, ಹುಸಿನಗುವನ್ನು ನಗುತ್ತಾ ಹೀಗೆಂದು ಹೇಳಿಕೊಳ್ಳಲಾರಂಭಿಸಿತಂತೆ.

"ಆಹಾ! ಏನು ಸುಖ! ಎಷ್ಟು ಆನಂದ, ಈ ಮಾಗಿಯ ಬಿಸಿಲು! ಸುಮ್ಮನೆ ಪೇಟೆಗೆ ಹೋಗಿ ಕಾಲು ನೋಯಿಸಿಕೊಳ್ಳುತ್ತಿದ್ದೆನಲ್ಲ! ಸಾಹುಕಾರರಲ್ಲಿ ಸಾಲಮಾಡಿ ದಂಡದ ಬಡ್ಡಿ ತೆರುತ್ತಿದ್ದೆನಲ್ಲ! ಮಕ್ಕಳು ಮರಿಗಳ ಮೇಲೆ ಸಾಲ ಹೊರಿಸಿ, ಪಾಪ ಬೇರೆ ಕಟ್ಟಿಕೊಳ್ಳುತ್ತಿದ್ದೆನಲ್ಲ! ಸಕಲಾತಿಯನ್ನು ತಂದು ಏನುಮಾಡಬೇಕಾಗಿತ್ತು? ಈಗಲೇ ಇಷ್ಟು ಬೆಚ್ಚಗಿರುವಾಗ ಜತೆಗೆ ಸಕಲಾತಿ ಯಾರಿಗೆ ಬೇಕು? ಕೆಲಸವಿಲ್ಲದ ಕೆಲಸಮಾಡಿ ಎಲ್ಲರೂ ಬಿದ್ದು ಬಿದ್ದು ನಗುವಂತಾಗುತ್ತಿತ್ತು. ಹೋಗಲಿ, ಈಗಲಾದರೂ ಬುದ್ಧಿ ಬಂತಲ್ಲ. ಇನ್ನು ಆ ಸಕಲಾತಿಯೂ ಬೇಡ, ಆ ಸಾಲ ತರುವದೂ ಬೇಡ, ಆ ಬಡ್ಡಿ

ತೆರುವದೂ ಬೇಡ. ಹೀಗೆಯೇ ಈ ಆನಂದದಲ್ಲಿಯೇ ಕಾಲವನ್ನೆಲ್ಲಾ ಕಳೆದುಬಿಡುವೆನು.''

ಹೀಗೆಂದುಕೊಂಡು ಎದ್ದುಹೋಗಿ, ನರಿಯು ತನ್ನ ದಿನದ ಕಾರ್ಯದಲ್ಲಿ ತೊಡಗಿತಂತೆ. ಮತ್ತೆ ರಾತ್ರಿಯಾಯಿತು, ಛಳಿಯೇರಿತು. ನಡುಗುತ್ತಾ, ಬೆಂಕಿ ಕಾಯಿಸುತ್ತಾ, ಖಂಡಿತ ಸಕಲಾತಿಯನ್ನು ತಂದೇತರಬೇಕೆಂದು ಸಂಕಲ್ಪ ಮಾಡಿತಂತೆ. ಮಲಗಿ ರಾತ್ರಿಯನ್ನು ಕಳೆದು ಸೂರ್ಯನು ಹುಟ್ಟಿ ಬಿಸಿಲೇರಿ ಬಿಸಿಲು ಕಾಯಿಸುತ್ತ ಬೆಚ್ಚಗೆ ಮಲಗಿರುವಾಗ, ಅದು ದಡ್ಡತನವೆಂದುಕೊಂಡಿತಂತೆ. ಹೀಗೆಯೇ ದಿನಗಳನ್ನು ಒಂದೊಂದಾಗಿ ಕಳೆದು, ಮುದಿಯಾಗಿ ಆಯುಸ್ಸು ತೀರಿ ನರಿಯು ಸಕಲಾತಿಯನ್ನು ಕೊಳ್ಳದೆಯೇ ಪ್ರಾಣವನ್ನು ಬಿಟ್ಟಿತಂತೆ.

ಅನಂತಶರ್ಮ.

## ೭. ಅಗ್ಗಿಷ್ಟಿಕೆ

ಮುದುಕ ಮುದುಕಿ ಎಂದರೆ ಅವರಿಗೆ ಕೋಪ: ಅಜ್ಜ ಅಜ್ಜಿ ಎಂದರೆ ಸಂತೋಷ. ಅದರಿಂದ ನಾವೂ ಅಜ್ಜ ಅಜ್ಜಿ ಎಂದೇ ಕೂಗೋಣ. ಅವರ ಮನೆಗೆ ಹೋಗಿರುವಾಗ ಅವರಿಗೇಕೆ ನಮ್ಮ ಮೇಲೆ ಕೋಪ ಬರಬೇಕು ?

ಆ ಹೊತ್ತು ಸಂಜೆ ಸುಮಾರು ನಾಲ್ಕು ಗಂಟೆ ಇರಬಹುದು. ಅಜ್ಜನು ಕಂಬಳಿ ಹೊದೆದುಕೊಂಡು, ಏನೋ ಹೇಳಿಕೊಳ್ಳುತ್ತಾ ಕುಳಿತು ಕೊಂಡಿದ್ದಾನೆ. ಅಜ್ಜಿ ಅತ್ತಕಡೆಯಲ್ಲಿ ಎಲೆ ಹಚ್ಚುತ್ತಾ ಕುಳಿತಿದ್ದಾಳೆ. ಇದ್ದಕ್ಕಿದ್ದ ಹಾಗೆಯೇ ಮೋಡ ಮುಚ್ಚಿಕೊಂಡು ಕತ್ತಲಾಯಿತು. ಅಜ್ಜಿಯು ಎಲೆ ಹಚ್ಚುತ್ತಿದ್ದವಳು ಎಲೆಯನ್ನು ಬಿಟ್ಟು ತಲೆಯೆತ್ತಿ ನೋಡಿ "ಸರಿ ! ಹಾಳು ಮಳೆಗೆ ಆರಂಭವಾಯಿತು. ಸಂಜೆ ಮಳೆ, ಇನ್ನು ನಾಳೆಯವರೆಗೂ ಬಿಡುವುದಿಲ್ಲ" ಎಂದು ಗೊಣಗಿದಳು. ಆ ಗೊಣಗಾಟ ಕೇಳಿ, ಅಜ್ಜನೂ ಕಣ್ಣುಬಿಟ್ಟು "ಆ ?" ಎಂದನು.

ಅಜ್ಜಿಯು "ಏನೂ ಇಲ್ಲ! ಮತ್ತೆ ಮಳೆ ಹಿಡಿಯಿತು ಎಂದೆ, ಅಷ್ಟೆ!" ಎಂದಳು.

ಅಜ್ಜನು ಆ ಹಿಂದಿನಕಾಲದ ಮುದುಕರಹಾಗೆ, "ಹೂ! ಬೇಕಲ್ಲ. ಇಲ್ಲದೆ ಹೋದರೆ, ಕೆರೆ ಕಟ್ಟೆಗೆಲ್ಲ ನೀರು ಬರುವುದು ಹೇಗೆ? ಕೆರೆ ಕಟ್ಟೆ ತುಂಬದಿದ್ದರೆ ಪೈರು ಪಚ್ಚೆ ಬೆಳೆಯುವುದು ಹೇಗೆ?" ಎಂದನು.

ಅಜ್ಜಿಯು "ಕೆರೆ ಕಟ್ಟೆ, ಪೈರು ಪಚ್ಚೆ, ಇರಲಿ. ಈಗ ಸದ್ಯದಲ್ಲಿ ಈ ಚಳಿ ಸಹಿಸುವವರು ಯಾರು? ಗಂಡಸರೇನೋ ಕಂಬಳಿ ಹೊದ್ದು ಕೊಂಡು ಕುಳಿತುಕೊಳ್ಳುತ್ತೀರಿ. ನಾವು ಹೆಂಗಸರು ಹಾಗೆ ಹೊದ್ದು ಕೊಂಡು ಕುಳಿತುಕೊಂಡರೆ, ಮನೆಯಲ್ಲಿ ಕೆಲಸ ಮಾಡುವವರು ಯಾರು?" ಎಂದಳು.

ಅಜ್ಜನು ನಕ್ಕು "ಇಷ್ಟೇನೆ? ಪ್ರಪಂಚಕ್ಕೆಲ್ಲ ಉಪಕಾರವಾಗುವ ವೇಳೆಯಲ್ಲಿ ನಮಗೆಷ್ಟು ಕಷ್ಟವಾದರೂ ಗೊಣಗಬಾರದು. ದೇವರು ಕೊಟ್ಟ ಹಾಗೆ ಬೆಂಕಿಯಿಲ್ಲವೆ? ಒಂದು ಅಗ್ಗಿಷ್ಟಿಕೆ ತುಂಬ ಬೆಂಕಿ ಇಟ್ಟುಕೊಂಡು ಕುಳಿತುಕೊಂಡರೆ ಆಯಿತು" ಎಂದನು.

ಅಜ್ಜಿಗೆ ಅದನ್ನು ಕೇಳಿ ಏಕೋ ಕೋಪ ಬಂತು. "ಇಲ್ಲಿ ನೋಡಿ, ಅಗ್ಗಿಷ್ಟಿಕೆ ಬೆಂಕಿ! ಕೆಂಡ ಉಳಿದರಲ್ಲವೆ ಬಿಸಿಯಿರುವುದಕ್ಕೆ! ಏನು ಮಾಡ ಬೇಕು ಹೇಳಿ?" ಎಂದಳು.

ಅಗ್ಗಿಷ್ಟಿಕೆಯಲ್ಲಿ ಎಲ್ಲೋ ಒಂದು ಮೂಲೆಯಲ್ಲಿ ಕೆಂಡ ಒಂದು ಉಳಿದಿತ್ತು. ಅದರಲ್ಲಿದ್ದ ಬೆಂಕಿ, ಅಜ್ಜಿ ಅಜ್ಜನ ಮಾತು ಕೇಳಿ, "ನಾನೇನು ಮಾಡಲಿ? ಈ ಮಳೆ ಗಾಳಿ! ನಾನು ಈಚೆಗೆ ಬಂದರೆ ಉಳಿಯುವುದು ಹೇಗೆ?" ಎಂದುಕೊಂಡು, ಇನ್ನೊಂದು ಬೂದಿ ದುಪ್ಪಟಿ ಮೇಲೆ ಎಳೆದುಕೊಂಡಿತು. ಆ ವೇಳೆಗೆ ಸರಿಯಾಗಿ ಭರ್ರನೆ ಗಾಳಿ ಬೀಸಿತು.

ಮಳೆಯೂ ಸುರಿಯುತ್ತಿತ್ತು. ಗಾಳಿಯು ಮಳೆಯ ನೀರನ್ನು ತೂರಿಕೊಂಡು ಬಂದು ಅಗ್ಗಿಷ್ಟಿಕೆಯ ಮೇಲೆ ಬೀಸಿತು. ಇದ್ದ ಬೆಂಕಿಯೂ ಆರಿ ಹೋಯಿತು. ಮಳೆ ನೀರಿನ ಗಾಳಿ ಅಜ್ಜಿಯ ಮೊಕಕ್ಕೂ ಬಡಿಯಿತು. ಅಜ್ಜಿಗೂ "ಅಬ್ಬಬ್ಬ! ಏನು ಚಳಿ!" ಎನ್ನಿಸಿ, ಬೆಂಕಿಯಾದರೂ ಕಾಸೋಣವೆಂದು ಅಗ್ಗಿಷ್ಟಿಕೆಯನ್ನು ಬೆದಕಿದಳು. ಇದ್ದ ಬೆಂಕಿಯೂ ಆರಿ ಹೋಗಿತ್ತು. ಅವಳಿಗೇಕೋ ಬಹಳ ಕೋಪ ಬಂದು, "ಈ ಹಾಳು ಗಾಳಿ ಬೇರೆ! ಇದ್ದ ಬೆಂಕಿಯನ್ನೂ ಆರಿಸಿಬಿಟ್ಟಿತು," ಎಂದು ಗಾಳಿಯನ್ನೂ ಬೈದಳು.

ಮನೆಯೊಳಗೆ ಬಂದಿದ್ದ ಗಾಳಿಗೆ ಬೈಗಳ ಕೇಳಿಸಿತು. ಗಾಳಿಗೆ ಗೊತ್ತು "ತನ್ನ ತಪ್ಪು ಏನೂಯಿಲ್ಲ! ಎಂದು. ಆದರೂ ಮುದುಕರು ಒಂದು ಮಾತ ನಾಡಿದರೆ ಆಡಿಕೊಳ್ಳಲಿ. ಅವರಿಗೂ ಶ್ರಮವಾಗಿದೆ. ಇರಲಿ, ಇವರಿಗೆ ಆ ಕಷ್ಟ ತಪ್ಪಿಸೋಣ," ಎಂದುಕೊಂಡು, ಹೇಳದೆ ಕೇಳದೆ ತಲೆಮರಿಸಿ ಕೊಂಡು ಹೊರಟು ಹೋದನು. ಇನ್ನೂ ಅಷ್ಟು ಹೊತ್ತಾಯಿತು. ಮೋಡ ಮುಚ್ಚಿಕೊಂಡ ದಿವಸದಲ್ಲಿ ಸಂಜೆ ಐದು ಘಂಟೆಗೆ ಕತ್ತಲಾಗು ವುದು ನಮಗೂ ಗೊತ್ತಷ್ಟೆ! ಹಾಗೆ ಅಂದೂ ಬೇಗನೆ ಕತ್ತಲಾಯಿತು. ಅಜ್ಜಿಯೂ, "ಆಗಲೇ ಕತ್ತಲಾಯಿತು" ಎಂದು ಗೊಣಗಿಕೊಳ್ಳುತ್ತ, ಎಲೆಗಳನ್ನೆಲ್ಲ ತೆಗೆದಿಡುತ್ತಿದ್ದಳು. ಕಣ್ಣು ಪೂರ್ತಿ ಕಾಣಿಸದೆ ಇರುವಷ್ಟು ಕಾವಳವಾಗಿದೆ. ಆಗ ಇನ್ನೊಮ್ಮೆ ಗಾಳಿ ಬೀಸಿತು. ಗಾಳಿಯ ಜೊತೆ ಯಲ್ಲಿ ಒಬ್ಬ ಹುಡುಗನೂ ಮನೆಯೊಳಕ್ಕೆ ಬಂದ ಹಾಗಾಯಿತು. ಅವನು ನೇರವಾಗಿ ಅಜ್ಜಿಯ ಬಳಿಗೆ ಹೋಗಿ "ಅಜ್ಜೀ! ಅಜ್ಜೀ!" ಎಂದನು.

ಅಜ್ಜಿಗೆ ಮೊದಲೇ ಕಣ್ಣು ಮಂದ. ಮೊಮ್ಮಗ ತುಂಟ ರಾಮ ನೇನೋ ಅಂದುಕೊಂಡು, "ಏನಪ್ಪಾ! ಅಜ್ಜಿಗೆ! ಆಗಲೇ ಅವಸರವೇನೋ ಊಟಕ್ಕೆ! ಸ್ವಲ್ಪ ತಡಿ. ದೀಪ ಈಗತಾನೇ ಹಚ್ಚಿದೆ. ಕೈಕಾಲು

ತೊಳೆದುಕೊಂಡು, ದೇವರಿಗೆ ನಮಸ್ಕಾರಮಾಡಿ ಬಾ ಹೋಗು ಮುಂಚೆ" ಎಂದಳು. ಹುಡುಗನು "ಅಲ್ಲ! ಅಜ್ಜಿ! ಸಂಜೆ ಹಾಳುಗಾಳಿ ಎಂದು ಬೈದೆಯಲ್ಲ, ಅದಕ್ಕೆ ಬಂದಿದ್ದೇನೆ" ಎಂದನು. ಅಜ್ಜಿಗೆ ಅರ್ಥವಾಗಲಿಲ್ಲ. "ಹಾಗೆಂದರೇನೋ?" ಎಂದಳು. "ಬೆಂಕೀಗೆ ಈ ಗಾಳಿಕಾಲದಲ್ಲಿ ನಿದ್ದೆ ಹೆಚ್ಚು ಅಜ್ಜಿ! ಕೊಂಚ ಹೊತ್ತು ಸಿಕ್ಕಿದರೆ ಸಾಕು, ದುಪ್ಪಟಿ ಹೊದ್ದುಕೊಂಡು ಸುರಟಿಕೊಳ್ಳುತ್ತಾನೆ. ಇಲ್ಲಿ ನೋಡು. ಈ ಊದುಕೊಳವೆ ತೆಗೆದುಕೋ, ಇದರಿಂದ ಊದಿಬಿಡು. ಅವನ ದುಪ್ಪಟಿ ಹಾರಿ ಹೋಗಿ, ಬೆಂಕಿ ಮೇಲಕ್ಕೆ ಏಳುತ್ತಾನೆ" ಎಂದನು. ಅಜ್ಜಿಗೆ ಇದು ಯಾರೋ ಏನೋ ಒಂದೂ ತಿಳಿಯಲಿಲ್ಲ. ಆಚೆ ಬೀದಿಯ ಭಟ್ಟರ ಮೊಮ್ಮಗನೇನೋ ಎಂದುಕೊಂಡು "ಆಗಲಿಯಪ್ಪಾ! ಆದರೆ ಊದುಕೊಳವೆ ಇಟ್ಟುಕೊಂಡು, 'ಪುಸ್ಸಾ! ಪುಸ್ಸಾ!' ಎಂದು ಊದುವವರು ಯಾರಪ್ಪಾ?" ಎಂದಳು. ಗಾಳಿಯು ಕೊನೆಗೆ "ಹೋಗಲಿ! ಅಜ್ಜಿ! ಅಗ್ಗಿಷ್ಟಿಕೆಯ ಕೆಳಗಡೆ ಒಂದು ತೂತುಮಾಡು. ಆ ತೂತಿನಿಂದ ನಾನೇ ಬಂದಾಗಲೆಲ್ಲಾ ಊದುತ್ತೇನೆ. ಬೆಂಕಿ ಎಚ್ಚರವಾಗುತ್ತಾನೆ" ಎಂದನು. ಅಜ್ಜಿಯು "ಆಗಲಿ" ಎಂದಳು. ಗಾಳಿಯು "ಬದುಕಿದೆ. ಮುದುಕರ ಶಾಪ ತಪ್ಪಿತು" ಎಂದು ಹೋದನು.

ಅಜ್ಜಿಯು ಅಜ್ಜನಿಗೆ ಎಲ್ಲವನ್ನೂ ಹೇಳಿದಳು. ಅಜ್ಜನೂ "ಎಲೆಲಾ! ನೋಡೋಣ!" ಎಂದು ಕೆಳಗಡೆ ತೂತಿರುವ ಅಗ್ಗಿಷ್ಟಿಕೆಯನ್ನು ಮಾಡಿ, ಗಾಳಿ ಬರುವ ದಿಕ್ಕಿಗೆ ತಿರುಗಿಸಿ ಇಟ್ಟನು. ಅಜ್ಜಿಗೆ ಚಳಿಯ ಕಾಟ ತಪ್ಪಿತು. ಗಾಳಿಯು ತನ್ನ ಮಾತಿನಂತೆ, ಬಂದ ಬಂದಾಗಲೆಲ್ಲಾ, ಊದಿ ಊದಿ ಬೆಂಕಿಯನ್ನು ಎಚ್ಚರಿಸಿ ಹೋಗುತ್ತಾನೆ. ಹೌದೋ ಅಲ್ಲವೋ ನೋಡಿ.

ದೇವುಡು.

# ೮. ಗೋಪಾಲ.

ಹೊಸೂರು ಎಂಬ ಒಂದು ಹಳ್ಳಿ. ಅದು ಮಲೆನಾಡಿನಲ್ಲಿದೆ. ಆ ಊರಿನ ಸುತ್ತಲೂ ಬೆಟ್ಟಗಳೂ, ಕಾಡುಗಳೂ ಇವೆ. ಆ ಊರಿನಲ್ಲಿ ದೇವಮ್ಮನೆಂಬ ಗೊಲ್ಲತಿ ಆಕೆಯು ನಿಷ್ಠಳು. ದೇವರಲ್ಲಿ ಬಹಳ ಭಕ್ತೆ. ದೇವಮ್ಮನಿಗೆ ಗಂಡನಿಲ್ಲ. ಆಕೆಯ ಗಂಡನೂ ಬಹಳ ನಿಷ್ಠನೂ, ದೇವರಲ್ಲಿ ಭಕ್ತಿಯನ್ನುಳ್ಳವನೂ ಆಗಿದ್ದನು. ಅವರಿಬ್ಬರ ಭಕ್ತಿಗೆ ಮೆಚ್ಚಿ ಭಗವಂತನು ಒಂದು ಗಂಡು ಕೂಸನ್ನು ಕೊಟ್ಟಿದ್ದನು. ಆ ಹುಡುಗನಿಗೆ ಗೋಪಾಲನೆಂಬ ತಮ್ಮ ಮನೆತನದ ದೇವರ ಹೆಸರನ್ನಿಟ್ಟಿದ್ದರು.

ದೇವಮ್ಮನ ಸಂಸಾರವೆಂದರೆ, ಈಗ ಸದ್ಯಕ್ಕೆ ತಾನೂ, ಗೋಪಾಲನೂ ಇಬ್ಬರೇ. ಗೋಪಾಲನಿಗೆ ಆರು ಏಳು ವರ್ಷಗಳಾಗುತ್ತಾ ಬಂದಿತು. ಅವನನ್ನು ಶಾಲೆಗೆ ಕಳುಹಿಸಬೇಕೆಂದು ದೇವಮ್ಮನು ಮನಸುಮಾಡಿದಳು. ಆದರೆ ಆ ಊರಿನಲ್ಲಿ ಶಾಲೆಯೇ ಇರಲಿಲ್ಲ. ಶಾಲೆಯು ಒಂದೂವರೆ ಮೈಲುಗಳ ದೂರದಲ್ಲಿದ್ದ ಅಗ್ರಹಾರದಲ್ಲಿದ್ದಿತು. ಹೊಸೂರಿನಿಂದ ಅಲ್ಲಿಗೆ ಹೋಗಬೇಕಾದರೆ ಒಂದು ದೊಡ್ಡ ಕಾಡನ್ನೇ ದಾಟಿ ಹೋಗಬೇಕಾಗಿದ್ದಿತು. ದೇವಮ್ಮನು ತನ್ನ ಮಗನು ವಿದ್ಯಾವಂತನಾಗಬೇಕೆಂದು ಒಂದು ದೊಡ್ಡ ಆಶೆಯನ್ನಿಟ್ಟುಕೊಂಡಿದ್ದಳು. ಆದರೆ ಪ್ರತಿನಿತ್ಯದಲ್ಲಿಯೂ ತನ್ನ ಚಿಕ್ಕ ಮಗನು ಅಷ್ಟು ದೂರ ಕಾಡಿನಲ್ಲಿ ನಡೆಯಬಲ್ಲನೇ ಎಂಬ ಸಂಶಯ. ಆ ಊರಿನಲ್ಲಿ ಗೋಪಾಲನ ಜೊತೆಗೆ ಯಾರೂ ಇಲ್ಲ! ದೇವರಲ್ಲಿ ತನ್ನ ಕಷ್ಟವನ್ನು ಹೇಳಿಕೊಳ್ಳುತ್ತಿದ್ದ ದೇವಮ್ಮನಿಗೆ ಧೈರ್ಯ ಬಂದಿತು. ಮರುದಿನವೇ ಗೋಪಾಲನನ್ನು ಶಾಲೆಗೆ ಕರೆದುಕೊಂಡು ಹೋಗಿ ಉಪಾಧ್ಯಾಯರ ವಶಕ್ಕೆ ಬಾಲಕನನ್ನು ಒಪ್ಪಿಸಿ ಬಂದಳು.

ಸಂಜೆಯು ಬರಲಾಗಿ ಗೋಪಾಲನು ಶಾಲೆಯಿಂದ ಹೊಸೂರಿಗೆ ಹೊರಟನು. ಅಗ್ರಹಾರವನ್ನು ಬಿಟ್ಟು ಒಂದು ಫರ್ಲಾಂಗಿನ ದೂರದಲ್ಲಿ

ಕಾಡು ಪ್ರಾರಂಭವಾಯಿತು. ಗೋಪಾಲನು ಚಿಕ್ಕವನು. ಕಾಡಿನಲ್ಲಿ ನಿಶ್ಶಬ್ದವಾಗಿದ್ದರಿಂದ ಗೋಪಾಲನಿಗೆ ಭಯವುಂಟಾಯಿತು. ಭಯದಿಂದ ಅಳುವುದಕ್ಕೆ ತೊಡಗಿದನು. ಆದರೇನು? ಯಾರುತಾನೇ ಅವನನ್ನು ಸಮಾಧಾನಗೊಳಿಸಬಲ್ಲರು. ಅಂತು ಮಧ್ಯೆ ಮಧ್ಯೆ ಧೈರ್ಯವನ್ನು ತಂದು ಕೊಂಡು ಹೊಸೂರಿಗೆ ಬಂದು ಮನೆಗೆ ಸೇರಿದನು.

ಗೋಪಾಲನು ಮನೆಗೆ ಬರುವಷ್ಟರಲ್ಲಿ ದೇವಮ್ಮನು ಮಗನಿಗೆಂದು ಹಾಲನ್ನು ಕರೆದು ಇಟ್ಟಿದ್ದಳು. ಗೋಪಾಲನಿಗೆ ಅದೊಂದೂ ಬೇಡವಾಗಿದ್ದಿತು. ಮಗನು ಸಪ್ಪಗಿದ್ದು ಅವನ ಕಣ್ಣುಗಳು ಕೆಂಪಗಿದ್ದುದನ್ನು ನೋಡಿ ದೇವಮ್ಮನು ಸಮಾಧಾನದಿಂದ ಮಗನ ಕಷ್ಟವೇನೆಂಬುದನ್ನು ತಿಳಿದಳು. ಜೊತೆಯಲ್ಲಿ ಯಾರೂ ಬರದಿದ್ದಲ್ಲಿ ಗೋಪಾಲನು ಶಾಲೆಗೆ ಹೋಗುವುದಿಲ್ಲವೆಂದು ದೇವಮ್ಮನು ತಿಳಿದಳು. ದೇವಮ್ಮನಿಗೆ ಯೋಚನೆ ಹುಟ್ಟಿತು. ಪಾಪ ಬಡಗೊಲ್ಲತಿ. ಮನೆಯಲ್ಲಿ ಗಂಡಸರಿಲ್ಲ. ನಾಲ್ಕು ಹಸುಗಳನ್ನು ಕಟ್ಟಿ ಹಾಲುವೊ ಸರು ಬೆಣ್ಣೆಯನ್ನು ಮಾರಿ ಜೀವಿಸಬೇಕು. ಗೋಪಾಲನೊಡನೆ ಶಾಲೆಗೆ ದೇವಮ್ಮನು ಹೋಗಲಾದೀತೆ?

ಆದರೆ ದೇವಮ್ಮನು ಧೈರ್ಯ ಕೆಡಲಿಲ್ಲ. ತನ್ನನ್ನು ಸಲುಹಲೆಂದು ಭಗವಂತನು ಗೋಪಾಲನನ್ನು ಕೊಟ್ಟಿದ್ದನು. ಆ ಗೋಪಾಲನನ್ನು ಕಾಪಾಡಲು ಆ ಭಗವಂತನೇ ಬರಬೇಕೆಂದು ದೇವಮ್ಮನು ತನ್ನಲ್ಲಿ ತರ್ಕಿಸಿಕೊಂಡು, ರಾತ್ರಿಯೆಲ್ಲವೂ ದೇವರನ್ನೇ ಪ್ರಾರ್ಥಿಸುತ್ತಾ ಕಾಲವನ್ನು ಕಳೆದಳು.

ಮರುದಿನ ಬೆಳಗಾಯಿತು. ಗೋಪಾಲನು ಶಾಲೆಗೆ ಹೊರಡುವ ಹೊತ್ತಾಯಿತು. ದೇವಮ್ಮನು "ಅಪ್ಪಾ ಗೋಪಾಲ, ಶಾಲೆಗೆ ಹೊರಡು, ಹೊತ್ತಾಯಿತು" ಎಂದಳು. ಗೋಪಾಲನು "ಜೊತೆಯಿಲ್ಲದೆ ನಾನು ಹೋಗುವುದಿಲ್ಲ" ಎಂದು ಹಟವನ್ನು ಹಿಡಿದನು. ಅದಕ್ಕೆ ದೇವಮ್ಮನು "ಅಪ್ಪಾ-ಗೋಪಾಲ, ನಿನ್ನ ಅಣ್ಣನು ಊರ ಹೊರಗೆ ದನಗಳನ್ನು

ಕಾಯುತ್ತಾ ಇದ್ದಾನೆ. ಅವನ ಹೆಸರೂ ಗೋಪಾಲನೆಂದು. ಊರ ಹೊರಗೆ ನೀನು ಹೋದಾಗ 'ಗೋಪಾಲ, ಗೋಪಾಲ!' ಎಂದು ಕೂಗು, ನಿಮ್ಮಣ್ಣನು ನಿನ್ನ ಜತೆಯಲ್ಲಿ ಬರುತ್ತಾನೆ, ಹೋಗು" ಎಂದು ಹೇಳಿ ಸಂತೈಸಿ ಕಳುಹಿಸಿದಳು.

ಗೋಪಾಲನು ಹೊರಕ್ಕೆ ಒಂದನು. 'ಗೋಪಾಲ, ಗೋಪಾಲ!' ಎಂದು ಕರೆದನು. ಹತ್ತಿರದಲ್ಲಿದ್ದ ಪೊದರಿನಲ್ಲಿ ಶಬ್ದವಾಯಿತು. ಅಲ್ಲಿಂದ ಕಂಬಳಿಯನ್ನು ಹೊದ್ದುಕೊಂಡು, ನವಿಲುಗರಿಯನ್ನು ತನ್ನ ಜುಟ್ಟಿಗೆ ಸಿಕ್ಕಿಸಿಕೊಂಡು, ಕೈಲಿ ಒಂದು ಕೊಳಲನ್ನು ಹಿಡಿದುಕೊಂಡು ಒಬ್ಬ ಬಾಲಕನು ಬಂದನು. ಬಂದವನು "ತಮ್ಮಾ! ಅಮ್ಮನು ನಿನ್ನನ್ನು ಶಾಲೆಗೆ ಕರೆದುಕೊಂಡು ಹೋಗಿ ಕರೆದುಕೊಂಡು ಬರುವಂತೆ ಹೇಳಿದ್ದಾಳೆ. ನಡೆ ಹೋಗುವ" ಎಂದು ಹೇಳಿ ಗೋಪಾಲನ ಬೆನ್ನಿನಮೇಲೆ ಕೈ ಹಾಕಿಕೊಂಡು ನಡೆದನು.

ಗೋಪಾಲನು ತನ್ನ ಅಣ್ಣನ ಜೊತೆಯಲ್ಲಿ ಸುಖದಿಂದ ಶಾಲೆಗೆ ಹೋಗಿಬರಲು ಪ್ರಾರಂಭಿಸಿದನು. ಶಾಲೆಗೆ ಹೊರಡುವಾಗಲೂ, ಮನೆಗೆ ಬರುವಾಗಲೂ ಊರ ಹೊರಗೆ ಗೋಪಾಲನು ಸಿದ್ಧವಾಗಿರುತ್ತಿದ್ದನು.

ಅಂತೂ ಗೋಪಾಲನಿಗೆ ಜೊತೆಯಾಯಿತು. ಅಣ್ಣ ತಮ್ಮಂದಿರಿಬ್ಬರೂ, ಹಾಡುತ್ತಲೂ, ಕೊಳಲನ್ನೂದುತ್ತಲೂ, ಕಥೆಗಳನ್ನು ಹೇಳಿಕೊಳ್ಳುತ್ತಲೂ ದಾರಿಯನ್ನು ನಡೆಯುತ್ತಿದ್ದರು.

ಇಷ್ಟರಲ್ಲಿ ಗೋಪಾಲನ ಉಪಾಧ್ಯಾಯರ ಹುಟ್ಟಿದ ಹಬ್ಬವು ಬಂದಿತು. ವಾಡಿಕೆಯಂತೆ ಬಾಲಕರು ತಮ್ಮ ತಂದೆತಾಯಿಗಳ ಯೋಗ್ಯತೆಗೆ ತಕ್ಕಂತೆ ಉಪಾಧ್ಯಾಯರಿಗೆ ಉಡುಗೆರೆಗಳನ್ನು ಕೊಡುತ್ತಿದ್ದರು. ಗೋಪಾಲನು ತಾಯಿಯನ್ನು ಕೇಳಿ ಉಪಾಧ್ಯಾಯರಿಗೆ ಏನನ್ನಾದರೂ ತೆಗೆದುಕೊಂಡು ಹೋಗಬೇಕೆಂದು ಇಷ್ಟಪಟ್ಟನು. ಆದರೆ ತಾಯಿಯು "ನಾನು

ಬಡವೆ, ನನ್ನಲ್ಲೇನೂ ಇಲ್ಲ, ಶಾಲೆಗೆ ಕರೆದುಕೊಂಡು ಹೋಗುತ್ತಿರುವ ನಿನ್ನ ಅಣ್ಣನನ್ನು ಕೇಳು, ಕೊಡುತ್ತಾನೆ" ಎಂದು ಹೇಳಿ ಕಳುಹಿಸಿದಳು. ಊರಬಾಗಿಲಲ್ಲಿ ಗೋಪಾಲನ ಅಣ್ಣನು ಸಿದ್ಧವಾಗಿದ್ದನು. ಅವನಲ್ಲಿ ತನ್ನ ಅಭಿಲಾಷೆಯನ್ನು ಗೋಪಾಲನು ಹೇಳಿಕೊಂಡನು. ಅದಕ್ಕೋಸ್ಕರವೆಂದು ಗೋಪಾಲನು, ತನ್ನ ತಮ್ಮನಿಗೆ ಒಂದು ಚಿಕ್ಕ ಮಡಿಕೆಯ ತುಂಬ ಗಟ್ಟಿಯಾದ ಕೆನೆಮೊಸರನ್ನು ತಂದುಕೊಟ್ಟನು.

ಅದನ್ನು ತೆಗೆದುಕೊಂಡು ಹೋಗಿ ಗೋಪಾಲನು ತನ್ನ ಉಪಾಧ್ಯಾಯರಿಗೆ ಕೊಟ್ಟನು. ಉಪಾಧ್ಯಾಯರಿಗೆಂದು ಇತರ ಬಾಲಕರು ಹೆಚ್ಚು ಬೆಲೆಯುಳ್ಳ ಉಡುಗೆರೆಗಳನ್ನು ತಂದಿದ್ದರು. ಆದಾಗ್ಯೂ ವಿಶ್ವಾಸದಿಂದ ತಂದು ಕೊಟ್ಟಿರುವ ಈ ಅಲ್ಪ ಬೆಲೆಯುಳ್ಳ ಮೊಸರನ್ನು ಅವರು ತಿರಸ್ಕರಿಸಲಿಲ್ಲ. ಎಲ್ಲರಿಗೂ ಅಲ್ಲಿಯೇ ಅದನ್ನು ಹಂಚಬೇಕೆಂದು, ಸ್ವಲ್ಪವೇ ಇದ್ದದ್ದರಿಂದ ಒಂದು ಚಮಚಾವಿನಲ್ಲಿ ಎಲ್ಲರಿಗೂ ಸ್ವಲ್ಪ ಸ್ವಲ್ಪವಾಗಿ ಹಂಚಿದರು. ಆ ಮೊಸರು ಅವರು ಎಂದೆಂದಿಗೂ ಕಂಡಿರದಷ್ಟು ರುಚಿಯುಳ್ಳದ್ದಾಗಿದ್ದಿತು. ಇದಕ್ಕೂ ಆಶ್ಚರ್ಯಕರವಾದ ಒಂದು ಸಂಗತಿಯು ನಡೆಯಿತು. ಉಪಾಧ್ಯಾಯರು ಕೊನೆಯವನಿಗೆ ಮೊಸರನ್ನು ಕೊಡುವಾಗ ಮಡಿಕೆಯು ಖಾಲಿಯಾಗುತ್ತಿತ್ತು. ಕೂಡಲೆ ಅದರ ತುಂಬ ಮೊಸರು ತುಂಬಿಕೊಳ್ಳುತ್ತಿತ್ತು. ಹೀಗೆಯೇ ಎಲ್ಲರಿಗೂ ಹೊಟ್ಟೆ ತುಂಬಿ ಸಾಕಾಗುವವರೆಗೂ ಚಿಕ್ಕ ಮಡಿಕೆಯಲ್ಲಿ ಮೊಸರು ತುಂಬುತ್ತಿತ್ತು.

ಉಪಾಧ್ಯಾಯರಿಗೆ ಈ ಮೊಸರಿನ ರುಚಿ ಮತ್ತು ಆ ಮಡಿಕೆಯ ಮಹತ್ವ ಇವೆರಡೂ ಆಶ್ಚರ್ಯವನ್ನುಂಟುಮಾಡಿದವು. "ಅಯ್ಯಾ, ಮಡಿಕೆಯನ್ನೂ ಮೊಸರನ್ನೂ ನಿನಗೆ ಯಾರು ಕೊಟ್ಟರು" ಎಂದು ಉಪಾಧ್ಯಾಯರು ಗೋಪಾಲನನ್ನು ಕೇಳಲಾಗಿ, ಗೋಪಾಲನು "ಗುರುಗಳೇ, ಇವನ್ನು ನಮ್ಮ ಅಣ್ಣನು ಕೊಟ್ಟ" ನೆಂದು ಹೇಳಿದನು.

"ಇದು ಮನುಷ್ಯನ ಕೈಕೆಲಸವಲ್ಲ. ನಾನು ಗೋಪಾಲನ ಅಣ್ಣನನ್ನು ನೋಡಲೇ ಬೇಕು" ಎಂಬ ಭಾವನೆಯು ಗುರುಗಳಿಗೆ ಉಂಟಾಯಿತು. "ಗೋಪಾಲ, ನಿಮ್ಮ ಅಣ್ಣನನ್ನು ನನಗೆ ತೋರು, ನಡೆ" ಎಂದು ಉಪಾಧ್ಯಾಯರು ಗೋಪಾಲನನ್ನು ಹೊಸೂರಿನ ಕಡೆ ಕರೆದುಕೊಂಡು ಹೊರಟರು.

ಅಗ್ರಹಾರವನ್ನು ಬಿಟ್ಟಕೂಡಲೇ ಕಾಡು ಪ್ರಾರಂಭವಾಯಿತು. ಅಲ್ಲಿ ಗೋಪಾಲನು ತನ್ನ ಅಣ್ಣನನ್ನು ಕೂಗಿದನು. ಎಷ್ಟು ಕೂಗಿದಾಗ್ಯೂ ಅಣ್ಣನ ಸುಳಿವೇ ಇಲ್ಲ. ಉಪಾಧ್ಯಾಯರಿಗೆ ಸಿಟ್ಟೇರಿತು. "ಗೋಪಾಲ, ನೀನು ಸುಳ್ಳನ್ನು ಹೇಳುತ್ತೀ ಎಂದು ನಾನು ಎಂದಿಗೂ ತಿಳಿದಿರಲಿಲ್ಲ. ಎಲ್ಲಿ ನಿಮ್ಮ ಅಣ್ಣನನ್ನು ತೋರಿಸು" ಎಂದು ಗದರಿಸಿದನು.

ಭಯವೂ, ನಾಚಿಕೆಯೂ ಉಪಾಧ್ಯಾಯರ ಆಪಾದನೆಯೂ, ಗೋಪಾಲನಿಗೆ ಅಳುವಂತೆ ಮಾಡಿದವು. ಅಳುತ್ತಾ, ಅಳುತ್ತಾ ಗೋಪಾಲನು ಪುನಃ "ಗೋಪಾಲ, ಅಣ್ಣ, ನನ್ನನ್ನು ನೀನು ಹೀಗೆ ತೊಂದರೆ ಪಡಿಸಬಹುದೆ, ಎಂದಿಗೂ ನಾನು ಸುಳ್ಳಾಡಿಲ್ಲ. ಇಂದು ನನ್ನ ಮಾತನ್ನು ನೀನು ಸುಳ್ಳುಮಾಡಿದೆ. ನನ್ನನ್ನು ಈ ಸಂಕಟದಿಂದ ಪಾರುಗಾಣಿಸು" ಎಂದು ತನ್ನ ಅಣ್ಣನನ್ನು ಕುರಿತು ಕೂಗಿಕೊಂಡನು.

ಅಷ್ಟರಲ್ಲಿ ಆಕಾಶದಿಂದ ಒಂದು ಶಬ್ದವು ಕೇಳಿ ಬಂದಿತು. ಅದು ಗೋಪಾಲನು ತನ್ನ ಅಣ್ಣನ ಧ್ವನಿಯೆಂದು ತಿಳಿದನು. "ಗೋಪಾಲಾ, ತಮ್ಮಾ, ನಾನು ನಿಮ್ಮ ಉಪಾಧ್ಯಾಯರ ಕಣ್ಣಿಗೆ ಬೀಳತಕ್ಕವನಲ್ಲ. ಅವರು ನನ್ನನ್ನು ನೋಡಲು ಇನ್ನೂ ಯೋಗ್ಯತೆಯನ್ನು ಸಂಪಾದಿಸಬೇಕು. ನಿನ್ನ ತಾಯಿಯ ಭಕ್ತಿಗೆ ಮೆಚ್ಚಿ ನಾನು ನಿನ್ನ ಜೊತೆಗಾರನಾದೆ. ನಿನ್ನ ತಾಯಿಯಂತಹ ತಾಯಿಯನ್ನು ಹೊಂದಲು ಜನರು ಸಾವಿರಾರು ವರ್ಷಗಳ ತಪಸ್ಸನ್ನು ಮಾಡಬೇಕು. ನೀನೇ ಧನ್ಯ; ನಾನು ದೇಶಕ್ಕೆಲ್ಲಾ ಗೊಲ್ಲನು,

ನಾನೇ ಗೋಪಾಲ, ನಾನೇ ಮುರಲೀಧರ, ನಾನೇ ಶ್ರೀಕೃಷ್ಣ!" ಎಂದು ಆ ಧ್ವನಿಯು ಹೇಳಿತು.

ಎಲ್ಲರಿಗೂ ಮಹದಾಶ್ಚರ್ಯವಾಯಿತು. ಗೋಪಾಲನನ್ನೂ ಅವನ ತಾಯಿಯನ್ನೂ ಎಲ್ಲರೂ ಸ್ತುತಿಸಿದರು. ಮೈಸೂರು ಮಕ್ಕಳಿರಾ! ಗೋಪಾಲನಂತೆ ನೀವುಗಳೆಲ್ಲರೂ ಆಗಬೇಕು. ಆಗ ಶ್ರೀಕೃಷ್ಣನು ನಿಮ್ಮ ಗೆಳೆಯನಾಗುತ್ತಾನೆ. ನೀವು ಸಂತೋಷಯುಕ್ತರಾಗುತ್ತೀರಿ. ಶ್ರೀ ಗೋಪಾಲನ ದಯೆಯು ನಿಮ್ಮೆಲ್ಲರಿಗೂ ದೊರಕಲಿ!

'ಮೈಸೂರು ಮಕ್ಕಳು.'

## ೯. ನರಿಗಳಿಗೇಕೆ ಕೋಡಿಲ್ಲ?

ತೀರ್ಥಹಳ್ಳಿಗೆ ನಾಲ್ಕೈದು ಮೈಲಿಗಳ ದೂರದಲ್ಲಿ ಒಂದು ಬೆಟ್ಟವಿದೆ. ಅದರ ಹೆಸರು ನವಿಲುಕಲ್ಲು. ಬೆಟ್ಟಕ್ಕೆ ಹಸುರಂಗಿ ತೊಡಿಸಿದಂತೆ ಕಾಡು ದಟ್ಟವಾಗಿ ಬೆಳೆದುಕೊಂಡಿದೆ. ಅದರ ನೆತ್ತಿಯಲ್ಲಿ ನಿಂತು ನೋಡಿದರೆ ಸುತ್ತಲೂ ಮೂವತ್ತು ನಾಲ್ವತ್ತು ಮೈಲಿಗಳ ಚೆಲುವಾದ ಮಲೆನಾಡಿನ ಕಾಡುಗಳ ನೋಟವು ಕಂಗೊಳಿಸುತ್ತದೆ. ಕಾಡು ಹಬ್ಬಿಕೊಂಡ ಆ ಬೆಟ್ಟದ ಸಾಲುಗಳು ಅಲೆಯಲೆಯಾಗಿ, ಬಾನಿನ ಕರೆಯಲ್ಲಿ ಮುಸುಕಾಗಿ ಮೋಡಗಳನ್ನು ಒಂದರ ಮೇಲೊಂದು ಹೇರಿ ಗುಡ್ಡೆ ಹಾಕಿದಂತೆ ಕಾಣಿಸುತ್ತವೆ. ನಡುವೆ ಕಣಿವೆಗಳಲ್ಲಿ ಗದ್ದೆಗಳೂ, ಅಡಕೆ ತೋಟಗಳೂ ಕಣ್ಣಿಗೆ ಮುತ್ತು ಕೊಡುವಂತೆ ಹಬ್ಬಿರುವುವು. ಮರಳಿ ಹೇಳುತ್ತೇನೆ; ಆ ಬೆಟ್ಟದ ಹೆಸರು ನವಿಲುಕಲ್ಲು!

ಇಂದಿಗೆ ಸುಮಾರು ಐವತ್ತೆರಡು ವರ್ಷಗಳ ಹಿಂದೆ ಆ ನವಿಲುಕಲ್ಲಿನಲ್ಲಿ ಒಂದು ಗುಬ್ಬಚ್ಚಿಯ ಸಂಸಾರವಿತ್ತು. ಹೆಣ್ಣು ಗುಬ್ಬಚ್ಚಿಯ ಹೆಸರು ಗುಬ್ಬಕ್ಕ. ಗಂಡು ಗುಬ್ಬಚ್ಚಿಯ ಹೆಸರು ಗುಬ್ಬಣ್ಣ. ಅವರಿಗಿದ್ದ ಮನೆಯು

ಸವಿಯಾದ ಮನೆ. ಅದು ಒಂದು ಹೆಮ್ಮರದ ನೆತ್ತಿಯ ಕೊಂಬೆಯ ತುದಿಯಲ್ಲಿತ್ತು. ಗಾಳಿ ಬಂದಾಗ ಆ ಕೊಂಬೆಯು ತೊಟ್ಟಿಲಂತೆ ತೂಗುತ್ತಿತ್ತು. ಆಗ ಆ ಗಂಡು ಹೆಣ್ಣು ಹಕ್ಕಿಗಳೆರಡೂ ಹಾಡಿ ನಲಿಯುತ್ತಿದ್ದವು. ಅವರ ಮನೆಗೆ ಬೆಲ್ಲದ ಗೋಡೆ; ಸಕ್ಕರೆ ಬಾಗಿಲು; ಕಬ್ಬಿನ ಮುಚ್ಚಿಗೆ. ಮನೆಯ ಅಂಗಳದಲ್ಲಿ ಒಂದು ಪುಟ್ಟ ಸರೋವರ. ಅದರಲ್ಲಿ ನೀರಿರಲಿಲ್ಲ; ಜೇನು ತುಪ್ಪವಿತ್ತು.

ಇಷ್ಟು ಸುಖಗಳಿದ್ದರೂ ಆ ಪಕ್ಷಿ ದಂಪತಿಗಳಿಗೆ ಮಕ್ಕಳಿರಲಿಲ್ಲ. ಗುಬ್ಬಣ್ಣನು ದೇವರಿಗೆ ಮೊರೆಯಿಟ್ಟು, ಹರಕೆ ಹೊತ್ತಮೇಲೆ ಮೂರು ಮಕ್ಕಳಾದರು. ಹರಕೆ ಸಲಿಸುವುದಕ್ಕಾಗಿ ಅವನು ಕಾಶಿಗೆ ಯಾತ್ರೆ ಹೋದನು. ಗುಬ್ಬಕ್ಕನೊಬ್ಬಳೇ ಮಕ್ಕಳನ್ನು ನೋಡಿಕೊಂಡು ಸಂಸಾರವನ್ನು ಸಾಂಗವಾಗಿ ನಡೆಸಿಕೊಂಡು ಬರುತ್ತಿದ್ದಳು.

ಹೀಗಿರುತ್ತಿರಲು ಒಂದು ದಿನ ರಾತ್ರಿ ದೊಡ್ಡ ಮಳೆ ಬಂತು. ಮಳೆ ಎಂದರೆ ಮಲೆನಾಡಿನ ಮಳೆ! ಸೋನೆ ಮಳೆಯಲ್ಲ; ಆನೆ ಮಳೆ! ಅದರ ಜೊತೆಗೆ ಗುಡುಗು, ಮಿಂಚು, ಸಿಡಿಲು, ಬಿರುಗಾಳಿ, ಆಲಿಕಲ್ಲು. ಮೇಲೆ ಕಗ್ಗತ್ತಲು! ಪಾಪ, ಗುಬ್ಬಕ್ಕ ಮನೆಯ ಸಕ್ಕರೆ ಬಾಗಿಲು ಬಲವಾಗಿ ಮುಚ್ಚಿ, ಸಿಹಿಮುತ್ತಿನ ಅಗಣಿಹಾಕಿ, ಎಲ್ಲಿ ಬೆಲ್ಲದ ಗೋಡೆ ಕರಗಿ ಹೋಗುವುದೋ ಎಂದು ಚಿಂತಿಸುತ್ತಾ, ಮಕ್ಕಳನ್ನು ತೊಟ್ಟಿಲಲ್ಲಿ ತೂಗುತ್ತಿದ್ದಳು. ಅಯ್ಯೋ ಪಾಪ, ಅವರ ಮನೆಯ ಜೇನುತುಪ್ಪದ ಕೊಳವಂತೂ!

ಅದೇ ಸಮಯದಲ್ಲಿ ಆ ಬೆಟ್ಟದ ಕಿಬ್ಬಿಯಲ್ಲಿ ಆ ಮಾರಿ ಮಳೆಗೆ ಸಿಕ್ಕಿಬಿದ್ದ ಮೂವರು ಪ್ರಯಾಣಿಕರು ಬಹಳ ನರಳುತ್ತಾ ಬರುತ್ತಿದ್ದರು. ಒಬ್ಬನ ಹೆಸರು ಹುಲಿಯಣ್ಣ; ಒಬ್ಬನ ಹೆಸರು ಕರಡ್ಯಣ್ಣ; ಒಬ್ಬನ ಹೆಸರು ನರಿಯಣ್ಣ. ಆ ಜಡಿಯಲ್ಲಿ ಮೂವರೂ ನಡುಗುತ್ತಿದ್ದರು. ಎಲ್ಲಿಯಾದರೂ ಒಂದು ಆಶ್ರಯ ಸಿಕ್ಕಿದರೆ ಸಾಕಲ್ಲಾ ಎಂದು ಭಗವಂತನನ್ನು ಬೇಡಿದರು.

ಹೇಗೆಂದರೆ, ಹುಲಿಯಣ್ಣ ಕಾಡು ಕಂಪಿಸುವಂತೆ ಕೂಗಿದನು. ಕರಡ್ಯಣ್ಣ ಗರ್ಜಿಸಿದನು ; ನರಿಯಣ್ಣ ಬಳ್ಳಿಕ್ಕಿದನು. ಅಂತೂ ಬಹಳ ಕಷ್ಟಪಟ್ಟು ಬೆಟ್ಟ ಹತ್ತಿದರು. ಅವರ ಕಣ್ಣಿಗೆ ಗುಬ್ಬಕ್ಕನ ಮನೆಯ ದೀಪ ಕಾಣಿಸಿತು. ಗುಬ್ಬಕ್ಕನು ತೊಟ್ಟಲು ತೂಗುತ್ತ ಹೇಳುತ್ತಿದ್ದ ಜೋಗುಳದ ಹಾಡೂ ಕೇಳಿಸಿತಂತೆ ನರಿಯಣ್ಣನಿಗೆ. ಮನೆಯನ್ನು ಕಂಡ ಕೂಡಲೆ ಅವರಿಗೆಲ್ಲ ಬಹಳ ಸಂತೋಷವಾಯಿತು. ಪರಿಚಯವಿಲ್ಲದಿದ್ದರೂ ಕೂಡ ಕಷ್ಟಕಾಲವಾದ್ದರಿಂದ ಗುಬ್ಬಕ್ಕನ ಮನೆಗೆ ಹೋಗಲು ನಿಶ್ಚಯಿಸಿ ಮೂವರೂ ಓಡಿದರು. ಓಡಿ ಮನೆಯ ಚಾವಡಿಗೆ ಬಂದರು. ಮಳೆ ಹೋ ಎಂದು ಸುರಿಯುತ್ತಿತ್ತು. ಮಿಂಚು ಮಿಂಚುತ್ತಿತ್ತು.

ನರಿಯಣ್ಣ ಬಾಗಿಲು ತಟ್ಟಿದನು. ಒಳಗೆ ಬೆದರಿ ಕುಳಿತಿದ್ದ ಗುಬ್ಬಕ್ಕ ಹೆದರಿ ನಡುಗಿದಳು, ಯಾರೋ ಏನೋ ಎಂದು. ನರಿಯಣ್ಣ ಬಲವಾಗಿ ಬಾಗಿಲು ತಟ್ಟಿದನು.

ಗುಬ್ಬಕ್ಕ "ಯಾರಪ್ಪಾ ಅದು ?" ಎಂದಳು.

ನರಿಯಣ್ಣ " ನಾನಪ್ಪಾ ! " ಎಂದನು.

" ನಾನು ಎಂದರೆ ? "

" ನಾನು ! ನರಿಯಣ್ಣ ! "

ಗುಬ್ಬಕ್ಕ ಬೆಚ್ಚಿದಳು. ನರಿಯಣ್ಣನ ದುಷ್ಕೀರ್ತಿಯು ಗುಬ್ಬಕ್ಕನ ಕಿವಿಗೂ ಕೂಡ ಮುಟ್ಟಿದ್ದಿತು. ಸ್ವಲ್ಪ ಧೈರ್ಯ ತಂದುಕೊಂಡು "ಅಪ್ಪಾ, ಬಡವರ ಮನೆ ! ಬಾಗಿಲನ್ನೇಕೆ ಹಾಗೆ ಬಡಿಯುತ್ತೀಯಾ ?" ಎಂದಳು.

"ಅಕ್ಕಾ, ಮಳೆಯಲ್ಲಿ ಸಿಕ್ಕಿ ಸಾಕಾಗಿದೆ. ಬೆಳಗಾಗುವತನಕ ಸ್ವಲ್ಪ ಜಾಗ ಕೊಟ್ಟರೆ ಸಾಕು" ಎಂದನು ನರಿಯಣ್ಣ.

"ಅಪ್ಪಾ, ಇಲ್ಲಿ ಜಾಗವಿಲ್ಲ. ಮೂವರು ಮಕ್ಕಳು ಬೇರೆ ಇದ್ದಾರೆ. ನಮಗೇ ಕಾಲು ಚಾಚಿ ಮಲಗಲು ತಾವಿಲ್ಲ. ನೀನು ಹೀಗೆ ದೊಂಬಿ ಮಾಡ ಬೇಡ ಮಾರಾಯಾ! ಮಕ್ಕಳೆದ್ದಾರು!"

ನರಿಯಣ್ಣನಿಗೆ ಯಾರೂ ಬಾಗಿಲು ತೆಗೆಯುವುದಿಲ್ಲವೆಂದುಕೊಂಡು ಹುಲಿಯಣ್ಣ "ಅಕ್ಕಾ ಗುಬ್ಬಕ್ಕ, ನಾನು ಹುಲಿಯಣ್ಣ, ಇದ್ದೇನೆ. ದಯವಿಟ್ಟು ಬಾಗಿಲು ತೆರೆ. ನಿನಗೇನೂ ಅಪಾಯ ಬರದಂತೆ ನೋಡಿಕೊಳ್ಳುತ್ತೇನೆ. ಹೆದರಬೇಡ. ನಮ್ಮ ಸಂಗಡ ಸಾದು ಸಜ್ಜನನಾದ ಕರಡ್ಯಣ್ಣನೂ ಇದ್ದಾನೆ" ಎಂದು ಹೇಳಿ ಬಾಗಿಲನ್ನು ದಡಬಡ ಬಡಿಯುತ್ತಿದ್ದ ನರಿಯಣ್ಣನಿಗೆ "ಲೋ ನರಿಯಾ, ಯಾಕೋ ದೊಂಬಿ? ಸುಮ್ಮನಿರೋ" ಎಂದು ಒಂದು ಗುದ್ದು ಕೊಟ್ಟನು.

ಗುಬ್ಬಕ್ಕನಿಗೆ ಸ್ವಲ್ಪ ಧೈರ್ಯ ಬಂದು ಬಾಗಿಲು ತೆರೆದಳು. ಮೂವರು ಅತಿಥಿಗಳೂ ಒಳಗೆ ಬಂದರು. ಕಾಲೆಲ್ಲಾ ಕೆಸರಾಗಿತ್ತು. ತೊಳೆದುಕೊಳ್ಳಲು ಬಿಸಿನೀರು ಕೊಟ್ಟಳು. ಮೈಯೆಲ್ಲ ಒದ್ದೆಯಾಗಿತ್ತು. ಒರಸಿಕೊಳ್ಳಲು ಮೈ ವಸ್ತ್ರ ಕೊಟ್ಟಳು. ಹೊಟ್ಟೆ ತುಂಬಾ ಹಸಿವೆಯಿತ್ತು. ಹೊಸ ಪೈರಿನ ಹಸನಾದ ಕಾಳನ್ನು ಬೇಯಿಸಿ ಮಾಡಿದ ಕೂಳನ್ನು ಬಡಿಸಿದಳು. ಮೂವರೂ ತಿಂದು ತೇಗಿದರು. ತರುವಾಯ ಮುರುವಿನ ಒಲೆಯ ಬಳಿ ಬೆಂಕಿಯ ಕಾವಿನಲ್ಲಿ ಒರಗಲು ಹುಲ್ಲಿನ ಹಾಸಿಗೆಗಳನ್ನೂ ಕೊಟ್ಟಳು.

ಮೂವರು ಅತಿಥಿಗಳೂ ಚಳಿಕಾಯಿಸಿಕೊಳ್ಳುತ್ತಿದ್ದರು. ಕರಡ್ಯಣ್ಣನು ಬೆಲ್ಲದ ಗೋಡೆಯ ಮೇಲೆ ತಗುಲಿಹಾಕಿದ್ದ ಮಹಾತ್ಮಾ ಗಾಂಧಿಯ ಪಟವನ್ನೂ, ಶ್ರೀರಾಮಕೃಷ್ಣ, ವಿವೇಕಾನಂದರ ಪಟವನ್ನೂ ನೋಡಿ, "ಇವೇಕೆ? ಈ ಪಟಗಳು" ಎಂದು ಕೇಳಿದನು.

"ಮಕ್ಕಳು ಈ ಮಹಾಪುರುಷರ ಸನ್ನಿಧಿಯಲ್ಲಿಯೇ ಬೆಳೆದರೆ ಅವರೂ ಮಹಾತ್ಮರಾಗುತ್ತಾರೆ. ಭರತ ಮಾತೆಯ ಉದ್ಧಾರಮಾಡು

ತ್ತಾರೆ. ಅದಕ್ಕೋಸ್ಕರ ಈ ಪಟಗಳನ್ನು ಇಟ್ಟಿದ್ದೇನೆ. **ಅವರಿಗೆ** ದಿನವೂ ಅವರ ಕಥೆಗಳನ್ನು ಜೋಗುಳದಂತೆ ಹೇಳುತ್ತೇನೆ. ಹಾಲು ಬೆಣ್ಣೆಗಳಲ್ಲಿ ಅವರ ಮಹಿಮೆಯನ್ನು ಊಡುತ್ತೇನೆ" ಎಂದಳು ಗುಬ್ಬಕ್ಕ.

"ಎಲ್ಲಿ? ನಿನ್ನ ಮಕ್ಕಳನ್ನು ನೋಡೋಣ!" ಎಂದನು ನರಿಯಣ್ಣ.

"ತೊಟ್ಟಲಲ್ಲಿ ಮಲಗಿ ನಿದ್ದೆ ಹೋಗಿದ್ದಾರೆ. ಬನ್ನಿ ನೋಡಿ" ಎಂದು ಗುಬ್ಬಕ್ಕನು ಅವರನ್ನು ಕರೆದುಕೊಂಡು ಹೋಗಿ ತೋರಿಸಿದಳು. ಮೂವರು ಮಕ್ಕಳೂ ಮಿಂಚಿನುಂಡೆಗಳಂತೆ ಹೊಳೆಯುತ್ತಿದ್ದರು. ಹುಲಿಯಣ್ಣ ಕರಡ್ಯಣ್ಣ ಇಬ್ಬರೂ ಸಂತೋಷಪಟ್ಟರು. ನರಿಯಣ್ಣನೂ ಬಹಳ ಸಂತೋಷಪಟ್ಟ!

ಎಲ್ಲರೂ ಮಲಗಿಕೊಂಡರು. ಕರಡ್ಯಣ್ಣ ಗೊರಕೆ ಹೊಡದದ್ದೂ ಹೊಡದದ್ದೇ. ಆದರೆ ಮಳೇ, ಗಾಳಿ, ಗುಡುಗು ಜೋರಾಗಿದ್ದುದರಿಂದ ಅದು ಯಾರಿಗೂ ತೊಂದರೆ ಮಾಡಲಿಲ್ಲ.

ನಸುಕು ಹರಿಯಿತು. ಮಳೆ ನಿಂತಿದ್ದಿತು. ಗುಬ್ಬಕ್ಕ ಎದ್ದು ಮನೆಯನ್ನು ಗುಡಿಸಿ, ರಂಗೋಲಿ ಹಾಕಿ, ಹಾಲು ಕರೆಯಲು ಕೊಟ್ಟಿಗೆಗೆ ಹೋದಳು. ಹುಲಿಯಣ್ಣ, ಕರಡ್ಯಣ್ಣ ಎದ್ದು ಹೋಗಲನುವಾದರು. ನರಿಯಣ್ಣನನ್ನು ಕರೆದರೆ "ಆ! ಹೂ! ಊಹೂ!" ಎಂದು ಮಲಗಿಯೇ ಇದ್ದನು. ಪಾಪ, ನರಿಯಣ್ಣನಿಗೆ ಬಹಳ ನಿದ್ದೆ ಎಂದು ತಿಳಿದು ಹುಲಿಯಣ್ಣ, ಕರಡ್ಯಣ್ಣ ಹೊರಟು ಹೋದರು. ಯಜಮಾನಿಯು ಸಿಕ್ಕಲಿಲ್ಲವಾದುದರಿಂದ ನಮಸ್ಕಾರ ಹೇಳಲಿಲ್ಲ.

ಅವರು ಹೊರಟುಹೋದ ಮೇಲೆ ನರಿಯಣ್ಣನು ಮೆಲ್ಲಗೆ ಎದ್ದನು. ಮನೆಯಲ್ಲಿ ಯಾರೂ ಇರಲಿಲ್ಲ. ಗುಬ್ಬಕ್ಕನ ಮಕ್ಕಳು ಆಗತಾನೇ ಎದ್ದು ಅಳುತ್ತಿದ್ದವು. ನರಿಯಣ್ಣ ಮೂರು ಮಕ್ಕಳನ್ನೂ ನುಂಗಿ ಬೇಗ ಬೇಗನೆ ಸಕ್ಕರೆಬಾಗಿಲನ್ನು ಮುರಿದುಕೊಂಡು ಓಡಿಹೋದನು!

ಸ್ವಲ್ಪಹೊತ್ತಾದ ಮೇಲೆ ಗುಬ್ಬಕ್ಕ ಹಾಲು ಕರೆದುಕೊಂಡು ಬಂದು ನೋಡುತ್ತಾಳೆ, ಮಕ್ಕಳಿಲ್ಲ! ಅತಿಥಿಗಳೂ ಇಲ್ಲ! ಗುಬ್ಬಕ್ಕ ಗೋಳೋ ಎಂದು ರೋದಿಸತೊಡಗಿದಳು. ಕಾಡಿನಲ್ಲಿ ಕೇಳುವವರಾರು? ಬಿಕ್ಕಿ ಬಿಕ್ಕಿ ಅತ್ತು ಕಡೆಗೆ ಕಳ್ಳರನ್ನು ಹುಡುಕಿಕೊಂಡು ಹೊರಟಳು. ಎಲ್ಲೆಲ್ಲಿಯೋ ಹುಡುಕಿದಳು. ಯಾರಾರನ್ನೋ ಕೇಳಿದಳು. ಕಡೆಗೆ ಹಾರುತ್ತಿರುವಾಗ ದೂರ ಒಂದು ಪರ್ವತದ ತಪ್ಪಲಿನಲ್ಲಿ ಹುಲಿಯಣ್ಣ ಕರಡ್ಯಣ್ಣ ಹೋಗುತ್ತಿದ್ದು ದನ್ನು ಕಂಡಳು. ಬೇಗ ಓಡಿಹೋಗಿ ತಡೆದಳು! ಅವರಿಗೆ ಆಶ್ಚರ್ಯ ವಾಯಿತು. "ಗುಬ್ಬಕ್ಕ ಏಕೆ ಅಳುತ್ತೀಯಾ?" ಎಂದರು.

"ನೀವೆಲ್ಲ ಕಳ್ಳರು! ನನ್ನ ಮಕ್ಕಳನ್ನು ತಿಂದು ಬಂದಿದ್ದೀರಿ! ನಿಮಗೆ ಮಾಡಿದ ಉಪಕಾರಕ್ಕೆ ಇದೇನೆ ಪ್ರತ್ಯುಪಕಾರ? ಅಯ್ಯೋ ೯ ೯ ೯ ೯!" ಎಂದು ಅತ್ತಳು.

ಹುಲಿಯಣ್ಣನಿಗೆ ಎದೆ ಕರಗಿಹೋಯಿತು. ಕರಡ್ಯಣ್ಣನಿಗೆ ಕಳವಳ ಹೆಚ್ಚಾಯಿತು. ಆಗ ಹೇಳಿದರು: ತಾವು ಬರುವಾಗ ನರಿಯಣ್ಣ ಅಲ್ಲಿಯೇ ಇದ್ದನೆಂದೂ, ಮಕ್ಕಳು ನಿದ್ದೆಮಾಡುತ್ತಿದ್ದವೆಂದೂ! ಕಡೆಗೆ ನರಿಯಣ್ಣನೇ ಆ ಘೋರಕೃತ್ಯವನ್ನು ಮಾಡಿರಬೇಕೆಂದು ನಿರ್ಧರಿಸಿ, ಗುಬ್ಬಕ್ಕನನ್ನೂ ಜೊತೆಯಲ್ಲಿ ಕರೆದುಕೊಂಡು ನರಿಯಣ್ಣನ ಪತ್ತೆಗೆ ಹೊರಟರು. ಹೊರಟು ಹುಡುಕಿದರು. ಎಲ್ಲಿಯೂ ಸಿಕ್ಕಲಿಲ್ಲ. ಕಡೆಗೆ ಎದುರಿಗೆ ಬರುತ್ತಿದ್ದ ಗೂಬ ಮ್ಮನನ್ನು ಕೇಳಿದರು. "ನರಿಯಣ್ಣ ಎರಡು ಮೈಲಿ ಆಚೆ ಓಡುತ್ತಿದ್ದ!" ಎಂದು ಗೂಬಮ್ಮ ಹೇಳಲು ಎಲ್ಲರೂ ಓಡಿದರು. ದೂರದಲ್ಲಿ ನರಿಯಣ್ಣ ಹೋಗುತ್ತಿದ್ದ. ಅವನು ಹುಲಿಯಣ್ಣ ಕರಡ್ಯಣ್ಣನ ಜೊತೆಯಲ್ಲಿ ಗುಬ್ಬಕ್ಕ ನನ್ನು ಕಾಣಲು ತನಗೆ ಕೇಡು ಬಂತೆಂದು ತಿಳಿದು ಓಟಕಿತ್ತನು. ಆದರೆ ಹುಲಿಯಣ್ಣನು ಮಿಂಚಿನಂತೆ ಹಾರಿಹೋಗಿ ಹಿಡಿದನು. ಕರಡ್ಯಣ್ಣನು "ಕಳ್ಳಾ! ಒಳ್ಳೇ ಮಾತಿನಿಂದ ಗುಬ್ಬಕ್ಕನ ಮಕ್ಕಳನ್ನು ಕೊಡುತ್ತೀಯೋ

'ಹುಃ !!' ಎನ್ನುತ್ತಲೇ ಚಪ್ಪಾಳೆ ತಟ್ಟಿ, ತಿಂಡಿಯ ಕಡೆಗೆ ಹಾರಿ, ಅದನ್ನು ಮುಗಿಸಿಬಿಡಬೇಕು.

ಹೂ ೦ ೦ ೦ ೦ ೦ ೦

ಹೂ ೦ ೦ ೦ ೦ ೦ ೦

**ಹೂ ೦ ೦ ೦ ೦ ೦ ೦**

**ಹುಃ ! !**

## ೩. ಭಗೀರನ ಕುಣಿತ

ಭಗೀರನ ಕುಣಿತಕ್ಕೆ ಮರಿಗಳೆಲ್ಲರೂ ಚಿರತೆಗಳಾಗಬೇಕು. ಈ ಚಿರತೆಗಳೆಲ್ಲವೂ ವೃತ್ತಾಕಾರವಾಗಿ ಕುಳಿತು ಅಂಬೆಗಾಲಿಡುತ್ತಾ ಬೇಟೆಗೆ ಏನಾದರೂ ಸಿಕ್ಕುವುದೋ ಎಂದು ಹುಡುಕುವಂತೆ ಎಡಕ್ಕೂ ಬಲಕ್ಕೂ ತಿರುಗಾಡುತ್ತಿರಬೇಕು. ಅಷ್ಟರಲ್ಲಿಯೇ ವೃತ್ತದ ಮಧ್ಯದಲ್ಲಿ ಏನೋ ಕಾಣುವುದು. ಆಗ ಪ್ರತಿ ಚಿರತೆಯೂ ಕುಳಿತುಕೊಂಡು ಅದನ್ನು ದುರುದುರನೆ ನೋಡಬೇಕು. (ಅದು ಒಂದು ಮೇಯುತ್ತಿರುವ ಜಿಂಕೆಯೆಂದು ಭಾವಿಸಿಕೊಳ್ಳಬೇಕು. ಮರಿಗಳು ಅಭಿನಯಿಸುವಾಗ ಪೆಪ್ಪರ್‌ಮೆಂಟ್ ಅಥವಾ ಬಿಸ್ಕತ್ತನ್ನು ಇಟ್ಟರೆ ಸ್ವಾರಸ್ಯ ಹೆಚ್ಚು.) ಆಮೇಲೆ ಆ ಜಿಂಕೆಗೆ ಕಾಣಿಸಿಕೊಳ್ಳದಂತೆ ಆ ಕಡೆ ಈ ಕಡೆ ತಿರುಗಿ, ಕೆಲವು ಹೆಜ್ಜೆಗಳು ಹಿಂದಕ್ಕೆ ಬರಬೇಕು. ನಂತರ ಪುನಃ ಮುಂದಕ್ಕೆ ನಿಧಾನವಾಗಿ ಹೋಗಬೇಕು. ಹತ್ತಿರ ಹೋದ ಹಾಗೆಲ್ಲಾ ಸದ್ದಾಗದಂತೆ ಮೆಲ್ಲನೆ ನಡೆಯಬೇಕು. ಹತ್ತಿರಕ್ಕೆ ಹೋದಮೇಲೆ ಮಲಗಿಕೊಳ್ಳಬೇಕು. ಆಗ ನಾಯಕನು ಸಮಯವನ್ನು ಕಾದಿದ್ದು 'ಹು' ಎಂದ ಕೂಡಲೇ ಎಲ್ಲರೂ ಘರ್ಜನೆಯನ್ನು ಮಾಡುತ್ತಾ ಆ ಊಹೆಯ ಜಿಂಕೆಯ ಮೇಲೆ ಬಿದ್ದು ಅದನ್ನು ಕಿತ್ತಾಡಬೇಕು.

ಕುಣಿತದ ಕಾಲದಲ್ಲಿ ಪ್ರತಿ ಚಿರತೆಯೂ ನಾಯಕನನ್ನೇ ನೋಡುತ್ತಾ, ಅವನು ಮಾಡಿದಂತೆಯೇ ಮಾಡಬೇಕು.

ಮಕ್ಕಳು ನರಿಯಣ್ಣನ ಬಾಯಿಸಿಂದ ಈಚೆಗೆ ಬೀಳುವರು" ಎಂದಳು ಗುಬ್ಬಕ್ಕ.

"ಸರಿ, ಹುಲಿಯಣ್ಣ ಹಿಡಿದುಕೊಂಡ. ಕರಡ್ಯಣ್ಣ ಹೇರಿದ! ಬಂದರು ಈಚೆಗೆ ಗುಬ್ಬಕ್ಕನ ಮೂರು ಮಕ್ಕಳು, ಚೀ, ಪೀ, ಚೀ, ಪೀ ಎನ್ನುತ್ತ! ಆದರೆ ಮಕ್ಕಳ ಮೈತುಂಬ ನರಿಯಣ್ಣನ ಜೊಲ್ಲು ತುಂಬಿ ಹೋಗಿತ್ತು! ಗುಬ್ಬಕ್ಕ ಮರಿಗಳನ್ನು ಎತ್ತಿಕೊಂಡು ಹರ್ಷದಿಂದ ಹೋದಳು, ತನ್ನ ಸವಿಯಾದ ಮನೆಗೆ! ಹುಲಿಯಣ್ಣನು ನರಿಯಣ್ಣನಿಗಿದ್ದ ಎರಡು ಕೋಡುಗಳನ್ನು ಶಿಕ್ಷೆಗಾಗಿ ಮುರಿದನು. ಕರಡ್ಯಣ್ಣನು "ಇನ್ನು ಮೇಲೆ ನಿನ್ನ ಜಾತಿಗೆ ಕೋಡುಗಳಿರದೆ ಹೋಗಲಿ" ಎಂದು ಶಾಪ ಕೊಟ್ಟನು. ಅಂದಿನಿಂದ ನರಿಯ ಜಾತಿಗೆ ಕೋಡುಗಳಿಲ್ಲ!

ಕೆ. ವಿ. ಪುಟ್ಟಪ್ಪ.

## ೧೦. ಮೌಗ್ಲಿಯ ಕಥೆ

### ೧

ನಮ್ಮ ದೇಶದ ಮಧ್ಯಪ್ರಾಂತ್ಯದಲ್ಲಿ ಒಂದು ದೊಡ್ಡ ಕಾಡು. ಆ ಕಾಡಿಗೆ ಸೌದೆಯನ್ನು ಮಾರಿ ಜೀವಿಸುತ್ತಿದ್ದ ಒಬ್ಬ ಬಡವನು ಸೌದೆಗಾಗಿ ಹೆಂಡತಿ ಮತ್ತು ಒಂದು ಚಿಕ್ಕಮಗುವಿನೊಂದಿಗೆ ಪ್ರತಿನಿತ್ಯವೂ ಹೋಗುತ್ತಿದ್ದನು. ಒಂದು ದಿನ ಅಲ್ಲಿಯೇ ಕತ್ತಲಾಯಿತು. ಆಗ ಅವನು ಕತ್ತಲೆಯಲ್ಲಿ ಕಾಡಿನಲ್ಲಿ ತಿರುಗಿದರೆ ದುಷ್ಟಮೃಗಗಳ ಬಾಯಿಗೆ ತುತ್ತಾಗಬೇಕಾಗುವುದೆಂದು, ಒಂದು ಮರದ ಕೆಳಗೆ ಮುಂದೆ ಸ್ವಲ್ಪ ಬೆಂಕಿಯನ್ನು ಹಾಕಿಕೊಂಡು ಹೆಂಡತಿ ಮತ್ತು ಮಗುವಿನೊಡನೆ ಮಲಗಿಕೊಂಡನು. (ಏಕೆಂದರೆ ಕಾಡುಮೃಗಗಳು ಬೆಂಕಿಗೆ ಹೆದರುತ್ತವೆ.)

ಆ ಕಾಡಿನಲ್ಲಿ ಒಂದು ಹುಲಿಯು ಆಹಾರಕ್ಕಾಗಿ ಓಡಾಡುತ್ತಿತ್ತು. ಅದರ ಹೆಸರು 'ಷೇರ್‌ಖಾನ್' ಎಂದು. ಸುತ್ತುತ್ತಾ, ಸುತ್ತುತ್ತಾ ಅದು ಇವರು ಮಲಗಿದ್ದ ಸ್ಥಳಕ್ಕೆ ಬಂದು, ಮಲಗಿರುವ ಮಗುವನ್ನು ನೋಡಿತು. ಅದನ್ನು ತಿಂದೇಬಿಡಬೇಕೆಂದು ಆಶಿಸಿ, ಬೆಂಕಿಗೂ ಹೆದರದೆ ಮೆಲ್ಲನೆ ಅದರ ಹತ್ತಿರಕ್ಕೆ ಬರುತ್ತಾ ಅಲ್ಲಿದ್ದ ಬೆಂಕಿಯಲ್ಲಿ ಕಾಲಿಟ್ಟುಬಿಟ್ಟಿತು. ಅದರ ಕಾಲು ಸುಟ್ಟುಹೋಯಿತು. ಆಗ ಅದು ಘಾಬರಿಯಿಂದ ಘರ್ಜಿಸಿತು; ಮತ್ತು ಹಸುವಿನಿಂದಲೂ, ಬೆಂದಕಾಲಿನ ನೋವಿನಿಂದಲೂ ಕೂಗುತ್ತಾ ಕುಂಟಿಕೊಂಡು ಹೋಯಿತು. ಈ ಘರ್ಜನೆಯಿಂದ ಎಚ್ಚೆತ್ತ ಮರ ಕಡಿಯುವವನೂ ಅವನ ಹೆಂಡತಿಯೂ ಭಯದಿಂದ ಮಗುವನ್ನು ಮರೆತು ಓಡಿದರು. ಮಗುವು ಅಂಬೆಗಾಲಿಡುತ್ತಾ ಹೋಗಿ ಒಂದು ಪೊದೆಯೊಳಕ್ಕೆ ನುಗ್ಗಿತು. ಆ ಪೊದೆಯೊಳಗೆ ಒಂದು ಗಂಡು ತೋಳವು ಇತ್ತು. ಅದು ಈ ಮಗುವನ್ನು ಕಂಡು, ತನ್ನ ಗುಹೆಗೆ ಎತ್ತಿಕೊಂಡು ಹೋಗಿ, ಅಲ್ಲಿದ್ದ ತನ್ನ ಹೆಂಡತಿಗೆ ಮರಿಗಳ ಜೊತೆಯಲ್ಲಿ ಈ ಮನುಷ್ಯನ ಮರಿಯನ್ನೂ ಸಾಕ ಬೇಕೆಂದು ಹೇಳಿತು. ಅದೇಪ್ರಕಾರ ಗುಹೆಯೊಳಗೆ ಹೆಣ್ಣು ತೋಳವು ಆ ಮಗುವನ್ನು ತನ್ನ ಮರಿಗಳೊಡನೆ ಸಾಕಿಕೊಂಡಿತು.

೨

ಅದೇ ಕಾಡಿನಲ್ಲಿಯೇ ಷೇರ್‌ಖಾನನನ್ನು ಹಿಂಬಾಲಿಸುತ್ತಿದ್ದ 'ಟಬಾಕಿ' ಎಂಬ ಒಂದು ನರಿಯಿತ್ತು; (ಟಬಾಕಿ ಎಂದರೆ ಎಂಜಲು ಬುರುಕ ಅಂತ. ತಬಕು ಎಂದರೆ ಎಂಜಲ ತಟ್ಟೆ; ಯಾರಾದರೂ ತಿಂದು ಬಿಟ್ಟ ತಬಕನ್ನು ನೆಕ್ಕಿ ಜೀವಿಸುವುದು 'ತಬಾಕಿ'). ಇದು ಈ ಮಗುವು ತೋಳನ ಗುಹೆಯಲ್ಲಿರುವುದನ್ನ ಕಂಡು ಮರುದಿನ ಷೇರ್‌ಖಾನನ ಹತ್ತಿರಕ್ಕೆ ಹೋಗಿ ಆ ಕಳೆದುಹೋದ ಮಗುವಿರುವ ಜಾಗವನ್ನು ತಾನು ನೋಡಿರುವು ದಾಗಿಯೂ, ಆ ಮಗುವಿನ ಮಾಂಸದಲ್ಲಿ ಒಂದು ಚೂರನ್ನು ತನಗೆ ಕೊಟ್ಟಲ್ಲಿ

ಅದಿರುವ ಸ್ಥಳವನ್ನು ತೋರಿಸುವುದಾಗಿಯೂ ಹೇಳಿತು. ಷೇರ್‌ಖಾನನು ಸಮ್ಮತಿಸಿತು. ತಬಾಕಿಯು ಅದನ್ನು ಕರೆದುಕೊಂಡು ಹೋಗಿ ದಿಗಲಿನಿಂದ ದೂರದಿಂದಲೇ ಆ ತೋಳನ ಗುಹೆಯನ್ನು ತೋರಿಸಿತು. ಷೇರ್‌ಖಾನನು ಗುಹೆಯ ಬಾಗಿಲಿಗೆ ಹೋಗಿ ಮೊದಲು ತನ್ನ ಪಾಲಿಗೆ ಸಿಕ್ಕಿದ್ದ ಆ ಮಗು ವನ್ನು ತನಗೆ ಹಿಂದಕ್ಕೆ ಕೊಟ್ಟುಬಿಡಬೇಕೆಂದು ಕೇಳಿತು. ಆದರೆ ತಾಯಿ ತೋಳನು ಒಪ್ಪಲಿಲ್ಲ. ಮತ್ತು ಈ ಮರಿಯೇ ಎಂದಾದರೂ ಒಂದು ದಿನ ನಿನ್ನನ್ನು ಕೊಲ್ಲುವುದು, ಎಂದು ಗದರಿಸಿತು. ಷೇರ್‌ಖಾನನಿಗೆ ಸಿಟ್ಟೇರಿತು. ಆದರೆ ಏನು ತಾನೆ ಮಾಡೀತು? ಏನಾದರೂಮಾಡಿ ಆ ಮಗುವನ್ನ ತಿನ್ನಲೇಬೇಕೆಂದು ದೃಢಸಂಕಲ್ಪವನ್ನು ಮಾಡಿಕೊಂಡು ಹಿಂತಿರುಗಿತು.

೩

ಮಗುವು ತೋಳದ ಮರಿಗಳೊಂದಿಗೆ ಬೆಳೆಯಿತು. ಅವುಗಳ ಸಂಸಾ ರಕ್ಕೆ ಸೇರಿದಂತೆಯೇ ಇತ್ತು. ಕಪ್ಪೆಯಂತೆ ಕುಪ್ಪಳಿಸುತ್ತಿದ್ದುದರಿಂದ ಇತರ ಮರಿಗಳು ಈ ಮರಿಯನ್ನು 'ಮೌಗ್ಲಿ' ಎಂದು ಕರೆದವು. (ಮೌಗ್ಲಿ ಎಂದರೆ ಸಣ್ಣ ಕಪ್ಪೆ). ಕೆಲವು ದಿವಸಗಳ ನಂತರ ತಂದೆ ತೋಳನು ಮೌಗ್ಲಿ ಯನ್ನು ತಮ್ಮ ಗುಂಪಿನ ಯಜಮಾನನಾದ ಅಖೇಲನಲ್ಲಿಗೆ ಕರೆದುಕೊಂಡು ಹೋಗಿ ಇತರ ಎಲ್ಲಾ ತೋಳಗಳಒಪ್ಪಿಗೆಯ ಮೇಲೆ ತಮ್ಮ ಗುಂಪಿಗೆ ಸೇರಿಸಿತು.

ಗುಂಪಿನ ನಿಯಮಗಳನ್ನು ಕಲಿಸಲು 'ಬಾಲು' ಎಂಬ ಕರಡಿಯೂ, ಶಸ್ತ್ರ ವಿದ್ಯಾಭ್ಯಾಸವನ್ನು ಮಾಡಿಸಲು 'ಭಗೀರ' ಎಂಬ ಚಿರತೆಯೂ ಅವನ ಗುರುಗಳಾದರು.

ಬಾಲುವು ಇತರ ಪ್ರಾಣಿಗಳಿಗೆ ಕಾಡಿನ ನಿಯಮಗಳನ್ನು ಹೇಳಿ ಕೊಡುತ್ತಿತ್ತು. ಮುದಿಯಾಗಿದ್ದರೂ ಬಹಳ ಒಳ್ಳೆಯ ಹೆಸರನ್ನು ಪಡೆದಿತ್ತು.

ಭಗೀರನಿಗೆ ಮರ ಹತ್ತುವುದು ಮತ್ತು ರಾತ್ರಿವೇಳೆಗಳಲ್ಲಿ ಒಬ್ಬರಿಗೂ ಕಾಣದಂತೆಯೂ ಸ್ವಲ್ಪವೂ ಸದ್ದುಮಾಡದಂತೆಯೂ ಸಂಚರಿಸುವುದಕ್ಕೆ ಬರುತ್ತಿತ್ತು. ಜೊತೆಗೆ ಒಳ್ಳೆಯ ಚತುರ ಮತ್ತು ಸಾಹಸಿಯಾದ ಬೇಟೆಗಾರನೂ ಹೌದು. ತನಗೆ ಬೇಕಾದಾಗ ರೋಷವನ್ನು ತಾಳಬಹುದಾಗಿದ್ದರೂ ಅದರ ಹೃದಯವು ದಯಾಳುವಾಗಿತ್ತು.

೪

ಹೀಗಿರಲು ಒಂದು ದಿನ ಮೌಗ್ಲಿಯು ಬಾಲೂ ಭಗೀರರೊಡನೆ ಅಲ್ಲಿದ್ದ 'ಬಂದರ್ ಲೋಗ್' ಅನ್ನು ನೋಡಿ ಅವುಗಳ ಸ್ನೇಹವನ್ನು ಮಾಡಿ ಕೊಳ್ಳಬೇಕೆಂದು ಇಷ್ಟಪಡುವುದಾಗಿ ಹೇಳಿದನು. (ಬಂದರ್ ಲೋಗ್ ಎಂದರೆ ಕಪಿಗಳ ಗುಂಪು). ಆದರೆ ಅವುಗಳ ಸ್ನೇಹವು ಸರಿಯಾದುದಲ್ಲವೆಂದೂ, ಅವು ಬುದ್ಧಿಯಿಲ್ಲದ ಪ್ರಾಣಿಗಳಾದುದರಿಂದ ಕೆಲಸಕ್ಕಿಂತ ಕುಣಿತವೇ ಹೆಚ್ಚೆಂದೂ, ಕಾಡುಪ್ರಾಣಿಗಳಾವುವೂ ಅವುಗಳೊಡನೆ ಸೇರುವುದಿಲ್ಲವೆಂದೂ ಹೇಳಿದವು.

ಇದಾದ ಕೆಲವು ದಿನಗಳ ಮೇಲೆ ಮೌಗ್ಲಿಯು ಚಿಕ್ಕ ಗುಡಿಸಲೊಂದನ್ನು ಕಟ್ಟಿಕೊಳ್ಳುತ್ತಿದ್ದನು. ಇದನ್ನು ಕಂಡ ಕಪಿಗಳು ಇವನಿಂದ ತಾವೂ ಮನೆಗಳನ್ನು ಕಟ್ಟುವುದನ್ನು ಕಲಿತುಕೊಳ್ಳಬೇಕೆಂದು ಯೋಚಿಸಿದುವು; ಮತ್ತು ಒಂದು ದಿನ ಅವನು ನಿದ್ರಿಸುತಿದ್ದಾಗ ಅವು ಮರದಿಂದ ಇಳಿದು ಬಂದುವು. ಅವುಗಳಲ್ಲಿ ಎರಡು ಬಲಶಾಲಿ ಕಪಿಗಳು ಅವನನ್ನು ಎತ್ತಿಕೊಂಡು ಮರದಿಂದ ಮರಕ್ಕೆ ಹಾರಿ ಎಲ್ಲಿಗೋ ಹೋದುವು. ಹೀಗೆ ಹೋಗುತ್ತಿದ್ದ ಮೌಗ್ಲಿಯು ಇತರ ಪ್ರಾಣಿಗಳನ್ನು ಸಹಾಯಕ್ಕಾಗಿ ಕೂಗಿದನು. ಇವನ ಕೂಗು ಅಂತರಿಕ್ಷದಲ್ಲಿ ಹಾರಾಡುತ್ತಿದ್ದ ಒಂದು ಹದ್ದಿಗೆ ಕೇಳಿಸಿತು. (ಹೀಗೆ ಎತ್ತರವಾದ ಮರಗಳ ಮೇಲೆಯೇ ಹೋಗುತ್ತಿದ್ದಾಗ ಮೌಗ್ಲಿಗೆ ಆಗಾಗ ಭೂಮಿಯ ಕೆಲವು ಭಾಗಗಳು ಮಾತ್ರ ಕಣ್ಣಿಗೆ ಬೀಳುತಿದ್ದುವು). ಆಗ ಆ ಹದ್ದು ಕಪಿಗಳು ಇವನನ್ನು ಎಲ್ಲಿಗೆ ಕರೆದು

ಕೊಂಡು ಹೋದುವೋ ಅದನ್ನು ನೋಡಿ ಬಂದು ಬಾಲೂ ಭಗೀರರಿಗೆ ಹೇಳಿತು. ಕೂಡಲೇ ಅವರಿಬ್ಬರೂ ಹುಡುಕಿಕೊಂಡು ಹೊರಟರು.

ಆದರೆ ಬಾಲುವು ಬಹು ಮುದಿಯಾಗಿದ್ದುದರಿಂದ ಬೇಗ ಬೇಗನೆ ನಡೆಯಲಾಗಲಿಲ್ಲ. ಅಷ್ಟು ಹೊತ್ತಿಗೆ ಕಪಿಗಳು ಮೌಗ್ಲಿಯನ್ನು ಎತ್ತಿ ಕೊಂಡು ಬಹುದೂರ ಹೋಗಿದ್ದುವು. ಇವರು ಹೋಗುತ್ತಿದ್ದ ದಾರಿಯಲ್ಲಿ ಒಂದು ಬೆಟ್ಟದ ಬಂಡೆಗಳ ಮಧ್ಯದಲ್ಲಿ ಒಂದು ದೊಡ್ಡ ಹೆಬ್ಬಾವು ಮಲ ಗಿದ್ದಿತು. ಅದರ ಹೆಸರು 'ಕಾ' ಎಂದು. ಕಾ ಬಹಳ ಒಳ್ಳೆಯ ಪ್ರಾಣಿ; ನಿಧಾನ ಸ್ವಭಾವ. ಅವರು ಅದನ್ನ ಕಂಡಾಗ ಅದಕ್ಕೆ ಬಹಳ ಹಸಿವಾಗಿದ್ದಿತು. ಅವರಿಬ್ಬರೂ ತಮ್ಮ ಸಹಾಯಕ್ಕೆ ಬರುವಂತೆ ಅದನ್ನು ಒಡಂಬಡಿಸಿದರು. ಜೊತೆಯಲ್ಲಿ ಕರೆದುಕೊಂಡು ಹೋಗಬೇಕೆಂದರು. ಅದನ್ನು ಒಪ್ಪಿಸುವುದು ಸ್ವಲ್ಪ ಕಷ್ಟವೇ ಆಗಿದ್ದಿತು. ಆಗ ಅವರು ಒಂದು ಉಪಾಯವನ್ನು ಮಾಡಿ ದರು. ಅದಕ್ಕೆ ಸಿಟ್ಟು ಬರುವಂತೆ ಕಪಿಗಳು ಅದನ್ನು ಬಹಳ ಹೀನದೃಷ್ಟಿ ಯಿಂದ ಕಾಣುತ್ತಿರುವುದಾಗಿಯೂ ಅದನ್ನು "ಹುಳು" ಎಂದು ಕರೆಯು ತ್ತಿರುವುದಾಗಿಯೂ ಅಲ್ಲದೆ ಕಣ್ಣಿಲ್ಲದ ಕುರುಡನೆಂದು ಹಾಸ್ಯಮಾಡುತ್ತಿರು ವುದಾಗಿಯೂ ಹೇಳಿದರು. ಕಾ ಗೆ ಕಪಿಗಳಮೇಲೆ ಕೋಪಬಂತು. ಇರಲಿ ಅವಕ್ಕೆ ಸರಿಯಾದ ಬುದ್ಧಿಯನ್ನು ಕಲಿಸುವೆನೆಂದು ಹೇಳುತ್ತಾ ಅವರೊಡನೆ ಹೊರಟಿತು.

೫

ಮೌಗ್ಲಿಯನ್ನು ಎತ್ತಿಕೊಂಡು ಹೋದ ಕಪಿಗಳು ಒಂದು ಹಾಳು ಬಿದ್ದ ಊರಿಗೆ ಹೋಗಿದ್ದುವು. ಭಗೀರನು ಮುಂದೆ ಬಂದು ಕಪಿಗ ಳೆಲ್ಲವೂ ಮೌಗ್ಲಿಯ ಸುತ್ತಲೂ ಕುಳಿತಿರುವುದನ್ನ ನೋಡಿ ಎದುರು ಬಿದ್ದಿತು. ಆದರೆ ಅವು ಸಾವಿರಗಟ್ಲೆ ಇದ್ದುವು. ಅವೆಲ್ಲವೂ ಅದನ್ನು ಹಿಂಸಿಸಿ ತೊಂದರೆಪಡಿಸಿದುವು. ಕಡೆಗೆ ಭಗೀರನು ಒಂದು ಆಳವಾದ ಕೊಳದಲ್ಲಿ ಬಿದ್ದು

ತಪ್ಪಿಸಿಕೊಳ್ಳಬೇಕಾಯಿತು. ಅಷ್ಟುಹೊತ್ತಿಗೆ ಬಾಲುವು ಅಲ್ಲಿಗೆ ಬಂದಿತು. ಪುನಃ ಜಗಳಕ್ಕೆ ಷುರುವಾಯಿತು. ಆದರೆ ಮೌಗ್ಲಿಯನ್ನು ಅವರ ಕೈಗೆ ಸಿಗದಂತೆ ಮಾಡಲು ಕಪಿಗಳು ಅವನನ್ನು ಒಂದು ಹಾಳುಮನೆಯ ಮೇಲಕ್ಕೆ ತೆಗೆದುಕೊಂಡು ಹೋಗಿ ಅಲ್ಲಿ ಒಂದು ತೂತಿನಲ್ಲಿ ಅವನನ್ನು ಕೆಳಕ್ಕೆ ತಳ್ಳಿಬಿಟ್ಟವು. ಅಲ್ಲಿ ತುಂಬಾ ವಿಷದ ಹಾವುಗಳಿದ್ದುವು. ಆದರೆ ಮೌಗ್ಲಿಗೆ ಅವುಗಳ ಬಾಷೆಯು ಬರುತ್ತಿದ್ದುದರಿಂದ ಕೂಡಲೆ ಅವುಗಳೊಡನೆ ಸ್ನೇಹ ಮಾಡಿಕೊಂಡನು.

ಇಷ್ಟರಲ್ಲಿ ಬಾಲೂ ಭಗೀರ ಎರಡೂ ಕಪಿಗಳೊಡನೆ ಹೋರಾಡಿದವು. ಎಷ್ಟು ಹೋರಾಡಿದರೂ ತಾವೇ ಸೋಲುವ ಸಂದರ್ಭ ಒದಗಿತು. ಅಷ್ಟು ಹೊತ್ತಿಗೆ ಕಾ ಮೆಲ್ಲಗೆ ಅಲ್ಲಿಗೆ ಬಂತು. ತನ್ನ ಗಟ್ಟಿಯಾದ ತಲೆಯಿಂದ ಕಪಿಗಳನ್ನೆಲ್ಲಾ ಸದೆ ಬಡಿದು ನುಂಗುವುದಕ್ಕೆ ಷುರುಮಾಡಿತು. ಹೆಬ್ಬಾವುಗಳಿಗೆ ಕಪಿಗಳನ್ನು ತಿನ್ನುವುದೆಂದರೆ ಬಲು ಆಸೆ. ಅನೇಕ ಕಪಿಗಳು ಕಾ ಹೊಟ್ಟೆಗೆ ಹೋದುವು. ಉಳಿದವು ಓಡಿದುವು.

ಆಮೇಲೆ ಈ ಮೂವರೂ ಮೌಗ್ಲಿಯನ್ನು ಬಂಧನದಿಂದ ಬಿಡಿಸಿಕೊಂಡುಬರಲು ಹೋದರು. ಇಲ್ಲಿ ಕಾ ತನ್ನ ಬಲವಾದ ತಲೆಯಿಂದ ಗೋಡೆಯಲ್ಲಿ ಒಂದು ರಂಧ್ರವನ್ನು ಮಾಡಿತು. ಮೌಗ್ಲಿಯು ಅದರ ಮುಖಾಂತರ ಈಚೆಗೆ ಬಂದನು.

೬

ಈ ಮಧ್ಯೆ ಷೇರ್‌ಖಾನನು ಸುಮ್ಮನಿರಲಿಲ್ಲ. ಕಾಡಿನಲ್ಲಿದ್ದ ಅನುಭವವಿಲ್ಲದ ಇತರ ತೋಳಗಳ ಸ್ನೇಹವನ್ನು ಬೆಳೆಸಿ ಮೌಗ್ಲಿಯಲ್ಲಿ ದ್ವೇಷವನ್ನು ಉಂಟುಮಾಡಿತು. ತೋಳಗಳ ಗುಂಪಿನ ಯಜಮಾನನಾದ ಆ ಖೇಲನು ಬಹಳ ಮುದಿಯಾಗಿದ್ದಿತು. ಯಜಮಾನ ಪಟ್ಟದಿಂದ ಅದನ್ನು ಓಡಿಸಬೇಕೆಂದೂ, ತಾನು ಆ ಪಟ್ಟಕ್ಕೆ ಬರಬೇಕೆಂದೂ, ಷೇರ್ ಖಾನನ

ಸಂಚು. ಅದಕ್ಕಾಗಿ ಆಖೇಲನೊಡನೆ ಬೇಟೆಗೆ ಹೊರಡುವಂತೆ ಇತರ ಚಿಕ್ಕ ತೋಳಗಳಿಗೆ ಹೇಳಿಕೊಟ್ಟಿತು. ಮುದಿಯಾಗಿದ್ದ ಕಾರಣ ಆಖೇಲನು ಬೇಟೆಯಲ್ಲಿ ಸೋತಿತು.

ಇದು ದೊಡ್ಡ ಅವಮಾನವಾದುದರಿಂದ ಯಜಮಾನತ್ವಕ್ಕೆ ಅದು ರಾಜೀನಾಮೇ ಕೊಡಬೇಕಾಯಿತು.

ಮುಂದೆ ಯಜಮಾನನು ಯಾರು? ಎಂಬುದೇ ಎಲ್ಲರ ಯೋಚನೆ. ಷೇರ್‌ಖಾನನು ತಾನೇ ಯಜಮಾನನಾಗಲು ವಿಶ್ವಪ್ರಯತ್ನ ಪಟ್ಟಿತು. ಬುದ್ಧಿಯಿಲ್ಲದ ಚಿಕ್ಕತೋಳಗಳು ಅದರ ಕಡೆಯಾದುವು. ಆದರೂ ಪ್ರಯೋಜನವಾಗಲಿಲ್ಲ.

ಈ ಸಂದರ್ಭದಲ್ಲಿ ಬಾಲೂ ಭಗೀರರು ಮೌಗ್ಲಿಯೊಡನೆ ಸಭೆ ನಡೆಸಿ ಅವನನ್ನು ಹತ್ತಿರದಲ್ಲಿರುವ ಹಳ್ಳಿಗೆ ಹೋಗಿ ಅಲ್ಲಿಂದ "ಕೆಂಪು ಹೂ" ವನ್ನು ತರುವಂತೆ ಹೇಳಿದವು (ಪ್ರಾಣಿಗಳು ಬೆಂಕಿಯನ್ನು ಕೆಂಪು ಹೂ ಎಂದು ಕರೆಯುತ್ತವೆ). ಅದೇ ಪ್ರಕಾರ ಮೌಗ್ಲಿಯು ಬೆಂಕಿಯನ್ನು ತಂದು ತೋಳಗಳ ಸಂಘದಲ್ಲಿ ಹತ್ತಿಸಿದನು. ಷೇರ್‌ಖಾನನು ಹೆದರಿ ಓಡಿತು. ಇತರ ತೋಳಗಳು ಈಗ ಮೌಗ್ಲಿಯನ್ನು ಯಜಮಾನ ಪಟ್ಟಕ್ಕೆ ಕೂರಿಸಿದುವು.

ಮೌಗ್ಲಿಯು ಯಜಮಾನನಾದ ಮೇಲೆ ಆಖೇಲನ ಜೀವವನ್ನು ಉಳಿಸಿದನು. ಏಕೆಂದರೆ ಹೊಸ ಯಜಮಾನನನ್ನು ಗೊತ್ತು ಮಾಡಿದಮೇಲೆ ಹಳೆಯ ಯಜಮಾನನ್ನು ಕೊಂದು ಹಾಕುವ ಪದ್ಧತಿಯು ಆ ತೋಳಗಳಲ್ಲಿ ವಾಡಿಕೆಯಾಗಿತ್ತು.

೭

ಕೆಲವು ಕಾಲಾನಂತರ ಮೌಗ್ಲಿಗೆ ಕಾಡಿನ ವಾಸವು ಬೇಜಾರಾಯಿತು. ತನ್ನನ್ನು ಸಾಕಿ ಸಲಹಿದ ತಂದೆ ಮತ್ತು ತಾಯಿ ತೋಳಗಳ ಅಪ್ಪಣೆ ಪಡೆದು ಊರಿಗೆ ಬಂದನು.

ಊರಿನಲ್ಲಿ ಶಾಸ್ತ್ರಗಳ ಅಧಿಕಾರದಮೇಲೆ ಇವನ ತಾಯಿಯು ಇವನನ್ನು ಗುರ್ತಿಸಿ ಮನೆಗೆ ಕರೆದುಕೊಂಡು ಹೋಗಿ ಬಟ್ಟೆಗಳನ್ನು ಕೊಟ್ಟು ಮನೆಯಲ್ಲಿಟ್ಟುಕೊಂಡಳು. ಆದರೆ ಇವನಿಗೆ ಆ ಬಟ್ಟೆ ಬರೆಗಳೂ ಮನೆಯುವಾಸವೂ ಸರಿಬರಲಿಲ್ಲ. ಹೊಲಗಳಿಗೆ ಹೋಗಿ ಮಲಗುತ್ತಿದ್ದನು.

ಒಂದು ದಿನ ಒಬ್ಬ ಅಗಸರವನ ಕತ್ತೆಯು ಒಂದು ಹಳ್ಳದಲ್ಲಿ ಬಿದ್ದಿತು. ಅದನ್ನು ಯಾರೂ ಮುಟ್ಟಲೊಲ್ಲರು. ಆಗ ಮೌಗ್ಲಿಯು ಆ ಅಗಸರವನ ಮೇಲೆ ಮರುಕಪಟ್ಟು ಕತ್ತೆಯನ್ನು ಮೇಲಕ್ಕೆ ತಂದುಬಿಟ್ಟನು. ಅದೇ ತಪ್ಪಾಗಿ ಅವನನ್ನು ಊರಿನಿಂದ ಹೊರಕ್ಕೆ ಓಡಿಸಿದರು. ಊರಿನವರ ದನಕರುಗಳನ್ನು ಮೇಯಿಸಿಕೊಂಡು ಬರುವ ಕೆಲಸವು ಇವನದಾಯಿತು. ದನಗಳನ್ನು ಮೇಯಿಸುವಾಗ ತನ್ನ ಕಾಡು ಸ್ನೇಹಿತರೊಡನೆ ಆಟಪಾಟಗಳನ್ನಾಡುತ್ತಿದ್ದನು. ಇದನ್ನು ನೋಡಿದ ಆ ಹಳ್ಳಿಯ ಇತರ ದನಕಾಯುವ ಹುಡುಗರು ಇವನನ್ನು ದೆವ್ವವೆಂದೂ ಪಿಶಾಚಿಗಳೊಡನೆ ಆಟವಾಡುವವನೆಂದೂ ಅಪಾದನೆ ತಂದು ಊರಿನವರಿಂದ ಕಲ್ಲನ್ನು ಬೀರಿಸಿ ಓಡಿಸಿಬಿಟ್ಟರು. ಆದರೂ ಮೌಗ್ಲಿಯು ಊರ ಹೊರಗೇ ಇದ್ದುಕೊಂಡು ಊರಿನ ದನಕರುಗಳನ್ನು ಮೇಯಿಸುತ್ತಿದ್ದನು.

ಹೀಗೆ ಒಂದು ದಿನ ಮೌಗ್ಲಿಯು ದನಗಳನ್ನು ಮೇಯಿಸುತ್ತಿದ್ದಾಗ ಒಂದು ತೋಳವು ಇವನ ಹತ್ತಿರಕ್ಕೆ ಬಂದು ಷೇರ್‌ಖಾನನು ತನ್ನನ್ನು ಕೊಲ್ಲಲು ಬರುತ್ತಿರುವುದಾಗಿ ಹೇಳಿತು. ಮೌಗ್ಲಿಯು ಕೂಡಲೇ ದನಗಳನ್ನು ಎರಡು ಭಾಗಗಳನ್ನಾಗಿ ಮಾಡಿಕೊಂಡು ಒಂದು ಭಾಗವನ್ನು ತಾನೂ ಇನ್ನೊಂದನ್ನು ಆ ತೋಳನೂ ಎದುರುಗಡೆಯಿಂದ ಓಡಿಸತೊಡಗಿದರು. ಷೇರ್‌ಖಾನನು ಇವುಗಳ ಮಧ್ಯದಲ್ಲಿ ನುಗ್ಗಿಬರುತ್ತಾ, ದನಗಳ ಕೊಂಬುಗಳಿಗೆ ಸಿಕ್ಕಿ ಸತ್ತುಹೋಯಿತು.

ಷೇರ್‌ಖಾನನ ಚರ್ಮವನ್ನು ಮೌಗ್ಲಿಯು ಸುಲಿಯುತ್ತಿದ್ದ ಕಾಲಕ್ಕೆ

# ಘೋಷಣೆ

"ಶಿಶುರ್ವೇತ್ತಿ ಪಶುರ್ವೇತ್ತಿ ವೇತ್ತಿ ಗಾನರಸಂ ಫಣೀ" ಎಂಬ ಸಂಸ್ಕೃತ ನುಡಿಯಿಂದ ನಮ್ಮ ಪೂರ್ವಿಕರು ಹಾಡಿಗೆ ಕೊಟ್ಟಿದ್ದ ಪ್ರಾಶಸ್ತ್ಯವು ವ್ಯಕ್ತವಾಗುತ್ತದೆ. ಸರ್ವ ಪ್ರಪಂಚಕ್ಕೂ ನೃತ್ಯಗಾನಗಳು ಸ್ವಭಾವಸಿದ್ಧವಾದದ್ದು. ಮಕ್ಕಳ ತೋಟದಲ್ಲಿ ಹಾಡುಕುಣಿತಗಳು ಪ್ರಫುಲ್ಲಿತ ಕುಸುಮಗಳು. ಇವುಗಳಿಂದ ತೋಟ. ಇವುಗಳಿಂದ ತೋಟದ ಬೆಡಗು. ಇವುಗಳಿಂದ ತೋಟಕ್ಕೆ ಜೀವ.

ಮಕ್ಕಳ ಅಕೃತ್ರಿಮವಾದ ನಡೆನುಡಿಗಳಿಂದ ಯಾರ ಮನಸ್ಸು ಕರಗುವುದಿಲ್ಲ? ಮಕ್ಕಳಿಗೆ ಆನಂದವೇ ನಿಜ. ಅವರ ಕೋಮಲಾಂತಃಕರಣ ದಲ್ಲಿ ವ್ಯಸನದ ಪ್ರವೇಶಕ್ಕೆ ಆಸ್ಪದವಿಲ್ಲ. ಗಿಡಮರಗಳು, ಹೂವುಬಳ್ಳಿಗಳು ತಮ್ಮ ಆನಂದವನ್ನು ಕುಣಿತದಿಂದ ಪ್ರದರ್ಶಿಸುತ್ತವೆ. ಹಕ್ಕಿಗಳು ಎದೆ ಪೊಡೆದು ಉಕ್ಕಿಬರುವ ಸಂತೋಷವನ್ನು ತಮ್ಮ ಇಂಪಾದ ಹಾಡಿನಿಂದ ಸೂಚಿಸುತ್ತವೆ. ಅಂದಮೇಲೆ ಪ್ರಕೃತಿದೇವತೆಯ ಭಾಷಾರೂಪವಾದ ನೃತ್ಯ ಗಾನಗಳು, ಪ್ರಕೃತಿಗೆ ಅತಿ ಸಮೀಪವಾದ ಶೈಶವಾವಸ್ಥೆಯ ಸುಖಾನುಭವ ದಲ್ಲಿರುವ ಮಕ್ಕಳನ್ನು ಆಕರ್ಷಿಸುವುದು ಏನಾಶ್ಚರ್ಯ?

ಮಕ್ಕಳ ಶಿಕ್ಷಣಕ್ರಮದಲ್ಲಿ ಹಾಡುಕುಣಿತಗಳು ಮುಖ್ಯವಾದ ಅಂಗ. ಉಲ್ಲಾಸಭರಿತವಾದ ಉತ್ಸಾಹವನ್ನುಂಟುಮಾಡುವ ಆನಂದ ದಾಯಕವಾದ ಹಾಡುಗಳನ್ನು ಮಕ್ಕಳಿಗೆ ಹೇಳಿಕೊಡಬೇಕು. ಸುಲಭವಾದ ರಾಗತಾಳಗಳಿಂದ ಕೂಡಿದ ಮಟ್ಟುಗಳಲ್ಲಿ ಮಕ್ಕಳ ಹಾಡುಗಳಿರಬೇಕು. ಒಬ್ಬರೇ ಹಾಡುವುದಕ್ಕಿಂತಲೂ ಹತ್ತುಜನ ಕೂಡಿ ಹಾಡುವುದರಲ್ಲಿ ಮಕ್ಕಳಿಗೆ ಹೆಚ್ಚು ಇಷ್ಟ. ಅಂತಹ ಹಾಡುಗಳನ್ನೇ ಅವರಿಗೆ ಒದಗಿಸಿಕೊಡ ಬೇಕು. ಹಾಡಿನಲ್ಲಿ ಅಭಿನಯವಿರಬೇಕು. ಒಬ್ಬನು ಪ್ರಶ್ನೆಯನ್ನು ಹಾಡು ವುದು, ಮಿಕ್ಕವರು ಅದಕ್ಕೆ ಉತ್ತರವನ್ನು ಹಾಡುವುದು, ಪ್ರಶ್ನೋತ್ತರ

ಗಳೆರಡರಲ್ಲಿಯೂ ಕುಣಿತ ಮುಂತಾದ ಅಭಿನಯಗಳಿರುವುದು ಇದರಲ್ಲಿ ಮಕ್ಕಳಿಗೆ ಬಹಳ ಪ್ರೀತಿ. ಭ್ರಾತೃವಾತ್ಸಲ್ಯ, ದೈವಭಕ್ತಿ, ಸ್ವದೇಶಾಭಿಮಾನ ಮೊದಲಾದ ಅಂಶಗಳನ್ನು ಮನೋಹಾರಿಯಾದ ಇಂಪಾದ ಹಾಡುಗಳಿಂದ ಮಕ್ಕಳಿಗೆ ಅತಿಸುಲಭವಾಗಿ ಹೇಳಿಕೊಡಬಹುದು.

ಹಾಡುಗಳು ಸುಲಭ ಶೈಲಿಯಲ್ಲಿರಬೇಕು. ತತ್ವಪದಗಳು, ಸೀಸಪದ್ಯಗಳು ಮೊದಲಾದ ಹಾಡುಗಳಲ್ಲಿ ಮಕ್ಕಳಿಗಿರುವ ಪ್ರೀತಿಯು ಕಷ್ಟತರಗಳಾದ ಕೃತಿಗಳಲ್ಲಿ ಇರುವುದಿಲ್ಲ. ಇದನ್ನೆಲ್ಲಾ ಜ್ಞಾಪಕದಲ್ಲಿಟ್ಟುಕೊಂಡು ಮಕ್ಕಳ ಗಾನಶಿಕ್ಷಣವನ್ನು ಕೈಕೊಳ್ಳಬೇಕು.

ಈ ಪುಸ್ತಕದಲ್ಲಿ ಸಾಧ್ಯವಾದ ಮಟ್ಟಿಗೂ ಗುಂಪಿನವರೆಲ್ಲರೂ ಒಟ್ಟಿಗೆ ಹಾಡಲು ಅನುಕೂಲವಾದ ಹಾಡುಗಳು ವಿತರಣೆಯಿಂದಲೂ ಜಾಗರೂಕತೆಯಿಂದಲೂ ಆರಿಸಿಕೊಳ್ಳಲ್ಪಟ್ಟಿವೆ ಎಂಬುದು ನಮ್ಮ ಅಭಿಪ್ರಾಯ. ಹಿರಿಯಣ್ಣಂದಿರು ಇವುಗಳನ್ನು ಮಕ್ಕಳಿಗೆ ಸರಿಯಾದ ರೀತಿಯಲ್ಲಿ ಹೇಳಿಕೊಡುವರೆಂದು ನಮ್ಮ ನಿರೀಕ್ಷೆ.

---

# ಹಾಡುಗಳು

# ಹಾಡುಗಳು

—:0:—

## ೧. ಪ್ರಾರ್ಥನೆ

ಜನಗಣಮನ ಅಧಿನಾಯಕ ಜಯಹೇ ಭಾರತಭಾಗ್ಯವಿಧಾತಾ |
ಪಂಜಾಬ ಸಿಂಧು ಗುಜರಾತ ಮರಾಠಾ ದ್ರಾವಿಡ ಉತ್ಕಲವಂಗ |
ವಿಂಧ್ಯ ಹಿಮಾಚಲ ಜಮುನಾ ಗಂಗಾ ಉಚ್ಛಲ ಜಲಧಿತರಂಗ |

ತವ ಶುಭ ನಾಮೆ ಜಾಗೆ |
ತವ ಶುಭ ಆಶಿಸಮಾಘೆ |
ಗಾಹೆ ತವ ಜಯ ಗಾಥಾ |

ಜನಗಣಮಂಗಳ ದಾಯಕ ಜಯಹೇ ಭಾರತಭಾಗ್ಯವಿಧಾತಾ |
ಜಯಹೇ ಜಯಹೇ ಜಯಹೇ ಜಯ ಜಯ ಜಯ ಜಯಹೇ || ೧ ||

ಅಹರಹ ತವ ಆಹ್ವಾನಪ್ರಚಾರಿತ ಶುನಿತವ ಉದಾರವಾಣೀ |
ಹಿಂದು ಬೌದ್ಧಸಿಕ ಜೈನ ಪಾರಸಿಕ ಮುಸಲ್ಮಾನ ಕ್ರಿಸ್ತಾನಿ |

ಪೂರವ ಪಶ್ಚಿಮ ಆಸೆ |
ತವ ಸಿಂಹಾಸನ ಪಾಸೆ |
ಪ್ರೇಮಹಾರ ಹೋಯಗಾಥಾ |

ಜನಗಣಐಕ್ಯವಿಧಾಯಕ ಜಯಹೇ ಭಾರತಭಾಗ್ಯವಿಧಾತಾ |
ಜಯಹೇ ಜಯಹೇ ಜಯಹೇ ಜಯ ಜಯ ಜಯ ಜಯಹೇ || ೨ ||

ಪತನ ಅಭ್ಯುದಯ ಬಂಧುರ ಪಂಥಾಜುಗ ಜಗಧಾವಿತ ಯಾತ್ರೀ |
ತುಮಿಚಿರ ಸಾರಥಿ ತವರಥ ಚಕ್ರೆ ಮುಖರಿತ ಪಥದಿನರಾತ್ರಿ |

ದಾರುಣ ವಿಪ್ಲವ ಮಾಝೆ |
ತವ ಶಂಖಧ್ವನಿ ಬಾಜೆ |
ಸಂಕಟ ದುಃಖ ತ್ರಾತಾ |
ಜನಗಣಪಥ ಪರಿಚಾಯಕ ಜಯಹೇ ಭಾರತಭಾಗ್ಯವಿಧಾತಾ |
ಜಯಹೇ ಜಯಹೇ ಜಯಹೇ ಜಯ ಜಯ ಜಯ ಜಯಹೇ || ೩ ||

ಘೋರತಿಮಿರ ಘನನಿಬಿಡ ನಿಶೀಥೆ ಪೀಡಿತ ಮೂರ್ಛಿತದೇಶೆ |
ಜಾಗ್ರತಛಿಲತವ ಅವಿಚಲ ಮಂಗಳ ನತನಯನೆ ಅನಿಮೇಶೆ |
ದುಸ್ವಪ್ನೆ ಆತಂಕೆ |
ರಖ್ಯಾ ಕರಿಲೆ ಅಂಗೆ |
ಸ್ನೇಹಮಯಿ ತುಮಿಮಾತಾ |
ಜನಗಣದುಃಖತ್ರಾಯಕ ಜಯಹೇ ಭಾರತಭಾಗ್ಯವಿಧಾತಾ |
ಜಯಹೇ ಜಯಹೇ ಜಯಹೇ ಜಯ ಜಯ ಜಯ ಜಯಹೇ || ೪ ||

ರಾತ್ರಿಪ್ರಭಾ ತಿಲ ಉದಿಲರ ವಿಚ್ಛವಿ ಪೂರ್ವ ಉದಯಗಿರಿಭಾಲೆ |
ಗಾಹಿ ವಿಹಂಗಮ ಪುಣ್ಯ ಸಮೀರಣ ನವ ಜೀವನರಸಢಾಲೆ |
ತವ ಕರುಣಾರುಣ ರಾಗೆ |
ನಿದ್ರಿತ ಭಾರತ ಜಾಗೆ |
ತವಚರಣೆ ನತಮಾತಾ |
ಜಯಹೇ ಜಯಹೇ ಜಯರಾಜೇಶ್ವರ ಭಾರತಭಾಗ್ಯವಿಧಾತಾ |
ಜಯಹೇ ಜಯಹೇ ಜಯಹೇ ಜಯ ಜಯ ಜಯ ಜಯಹೇ || ೫ ||

ಶ್ರೀ ರವೀಂದ್ರನಾಥ ಠಾಕೂರ್.

# ೨. ನಿಖಿಲ ಜನನಿ

ಸುರುಟಿರಾಗ—ಆದಿತಾಳ

ನಿಖಿಲ ಜನನಿ ಸಾದರಂ | ತ್ವಾಂ ನಮಾಮಿ ಮಾತರಂ || ಪ ||
ಮಂದಹಸಿತ ನಿಂದಿತಸಿತ | ಸರಸಿಜಮುಖಿ ದೇವ್ಯಹಂ || ಅನು ||

ದರವಿದಳಿತ ಸುಮಕುಲಾಂ | ಸಾರ ಮಧುರ ಸತ್ಫಲಾಂ |
ಸುರಭಿಶೀತ ಶುಭಜಲಾಂ | ತ್ವಾಂ ನಮಾಮಿ ಮಾತರಂ || ೧ ||

ತ್ವಮಸಿದೇವಿ ಶುಭಕರೀ | ತ್ವಾಮಾನಂದ ಶಂಕರೀ |
ತ್ವಮಸಿಧೈರ್ಯ ಬಲಕರೀ | ತ್ವಾಂ ನಮಾಮಿ ಮಾತರಂ || ೨ ||

ಭಾರತೀಯ ಪೂಜಿತಾನ್ | ಕುರುಲೋಕಬಾಂಧವಾನ್ |
ಪುರುಷಕಾರ ಸುಫಲಿತಾನ್ | ತ್ವಾಂ ನಮಾಮಿ ಮಾತರಂ || ೩ ||

ಬೆಂಗಳೂರು ಎ. ಡಿ. ಎ. ಯವರ ವಿಶ್ವಾಸದಿಂದ.

# ೩. ಪಾಹಿಪದ್ಮ

ಪಾಹಿಪದ್ಮ ಬಂಧುನೇತ್ರ ಪಾರ್ವತೀಪತೇಹರಾ |
ಪಾಹಿಭವ್ಯದಾಯಕ ಪರಿಪಾಲಯಾಸು ಶಂಕರಾ ||

ಶರಣುದಕ್ಷ ಯಜ್ಞಧ್ವಂಸ ಶಂಭುವೇ ಜಟಾಧರಾ |
ನಿರುತನೃತ್ಯ ಲೋಲತ್ರಿಪುರ ವೈರಿಭೋ ದಿಗಂಬರ ||

ಸಾರಸಾಕ್ಷ ಭಕ್ತಪಾಲ ಭಾರ್ಗವೀ ಮನೋಹರ |
ದಾನವೇಂದ್ರನಾಶಕ ಪರಿಪಾಹಿ ಶಿವಶಂಕರಾ ||

ಭೋಗಿಶಯನ ವಾಸವಾದಿ ದೇವಬೃಂದ ವಂದಿತ |
ರಾಗರಹಿತ ಭೋಗಮಹಿತ ಮುನಿಜನಾದಿ ವಂದಿತ ||

ದುಷ್ಟಶಿಕ್ಷ ಶಿಷ್ಟರಕ್ಷ ಪೂಜಿತತ್ರಿವಿಷ್ಟಪ |
ನಷ್ಟದೋಷ ಭವ್ಯವೇಷ ಸೇವಿತೇಷ್ಟದಾಯಕಾ ||

ಮೂರವೈರಿ ನಂದಿವಾಹ ವಾರಣಾ ದಿಗಂಬರ |
ಸೀರದಾಭ ಸುಂದರಾ ತನುಜಾರು ಚಂದ್ರಶೇಖರ ||

## ೪. ಐಮಾತೃಭೂಮಿ

ಶಂಕರಾಭರಣರಾಗ—ಆದಿತಾಳ

ಐಮಾತೃಭೂಮಿ ತೇರೇ ಚರಣೋಮೆ ಶಿರ್‌ನಮಾವೂ |
ಮೈಭಕ್ತಿ ಭೇಟ ಅಪನೀ ತೇರೀ ಶರಣ್ಮೆಲಾವೂ || ೧ ||

ಮಾಥೇಪೆತೂಹೊ ಚಂದನ್, ಛಾತೀಪೆತೂಹೊ ಮಾಲಾ |
ಜಿಹ್ವಾಪೆ ಗೀತತೂಂಹೋ ಮೈತೇರ ನಾಮಗಾವೂ || ೨ ||

ಜಿಸ ಸೇಸುಪೂತ ಉಪಜೇ, ಗಾಂಧಿ ತಿಲಕ ಜೈಸೆ |
ಉಸತೇರಿ ಧೂಲಿಕೋ ಮೈನಿಜ ಶೀರ್ಷಪೇಚಢಾವೂ || ೩ ||

ಮಾನೀ ಸಮುದ್ರ ಜಿಸಕೀ, ಧೂಲೀ ಕಪಾನ ಕರಕೆ |
ಕರತಾಹೈ ಮಾನ ತೇರೆ, ಉಸಪೈರಕೋ ಮನಾವೂ || ೪ ||

ವೇದೇಶ ಮಾನವಾಲೇ, ಚಢಕರ ಉತರಗಯೇಸಬ್ |
ಗೋರೇ ರಹೇನಕಾಲೇ, ತುಝುಕೋಹೀ ಏಕಪಾವೂ || ೫ ||

ಸೇವಾಮೆ ತೇರಿ ಸಾರೇ, ಭೇದೋಂಕೊ ಭೂಲಜಾವೂ |
ವಹಪುಣ್ಯ ನಾಮತೇರಾ, ಪ್ರತಿದಿನ ಸುನೂ ಸುನಾವೂ || ೬ ||

ತೇರೇಹಿ ಕಾಮಆವೂ, ತೇರಾಹಿ ಮಂತ್ರಗಾವೂ |
ಮನ ಔರದೇಹ ತುಝುಪರ್ ಬಲಿದಾನ ಮೈಚಢಾವೂ || ೭ ||

# ೫. ಕೈವಲ್ಯದ ಸೋಪಾನಗಳು

ಜಲ್ಲಾ ಜಂಜೋಟ್‌ರಾಗ—ಆದಿತಾಳ

ಕೈವಲ್ಯದ ಸೋಪಾನಗಳಿದುದೈ |
ಜೀವಿತ ಪುರುಷಾರ್ಥದ ಪರಿಯೈ || ಪ ||

ನಾನಾಭೋಗದ ಬೀರವನುಳಿದು |
ದೀನಹೀನ ಜನಬಂಧುವೆನಿಸುವ |
ಮಾನಿತಪದವೆಯಾ ಪರದಿರವೈ || ೧ ||

ಶ್ರಮಸಹಿಷ್ಣುತೆ ಸುಖಜೀವಿತದ |
ವಿಮಲಾತ್ಮರ ಸಮಭಾವದ ಭುವಿಯು |
ಪ್ರೇಮಭಾಷ್ಪ ಮುಕ್ತಾಫಲವೈ || ೨ ||

ಶೋಕದಿ ಶಿಕ್ಷೆಯ ನೊಂದಿದ ಮನದ |
ಶೋಕಾನಂದದ ಶಾಂತಮಹಿಮೆಯ |
ಲೋಕದಂದ ವೈಕುಂಠವದೈ || ೩ ||

ನೋವನರಿಯದ ಸೇವಾತಪಕೆ |
ದೇವತೆಗಳು ತಲೆಬಾಗಿಪ ಪಾವನ |
ಭಾವವೆ ಸುಲಭಸಾಯುಜ್ಯವದೈ || ೪ ||

ದುರಿತವನೀಗುವ ಕರುಣಾಮಯದ |
ಧರೆಯಾನಂದದ ದೀನ ಹೃದಯವೆ |
ಪರಮಾತ್ಮನ ಲೀಲಾ ಗೃಹವೈ || ೫ ||

ಭಾರತಿ.

## ೬. ವನಸುಮ

ಅಠಾಣರಾಗ—ರೂಪಕತಾಳ

ವನಸುಮದೊಲೆನ್ನ ಜೀ |
ವನವುವಿಕಸಿಸುವಂತೆ |
ಮನವವನನುಗೊಳಿಸು ಗುರುವೇ—ಹೇ ದೇವ || ಪ ||

ಜನಕೆ ಸಂತಸವೀವ |
ಘನನು ನಾನೆಂದೆಂಬ |
ಎಣಿಕೆ ತೋರದೆ ಜಗದ ಪೊಗಳಿಕೆಗೆ ಬಾಯ್‌ಬಿಡದೆ ||ಅನು||

ಕಾನನದಿ ಮಲ್ಲಿಗೆಯು |
ಮೌನದಿಂ ಬಿರಿದು ನಿಜ |
ಸೌರಭವ ಸೂಸಿ ನಲವಿಂ |
ತಾನೆಲೆಯ ಪಿಂತಿರ್ದು |
ದೀನತೆಯ ತೋರಿ ಅಭಿ |
ಮಾನವನು ತೊರೆದು ಕೃತಕೃತ್ಯತೆಯ ಪಡೆವಂತೆ ||೧||

ಉಪಕಾರಿ ನಾನು ಎ |
ನ್ನುಪಕೃತಿಯು ಜಗಕೆಂಬ |
ವಿಪರೀತ ಮತಿಯನುಳಿದು |
ವಿಪುಲಾಶ್ರಯವ ನೀವ |
ಸುಫಲ ಸುಮಭರಿತ ಪಾ |
ದ ಪದಂತೆ ನೈಜಮಾದೊಳ್ವಿನಿಂ ಬಾಳ್ವವೊಲು ||೨||

ಡಿ. ವಿ. ಜಿ.

# ೭. ಮೈಸೂರು

ಶರಷಟ್ಪದಿ

ಸಿರಿಮನ್ "ಕೃಷ್ಣ" ನು | ಕರುಣದಿ ಆಳುವ |
ವರ ಸಂಸ್ಥಾನವು ಮೈಸೂರು || ಪ ||
ವರುವರುಷಕೆ ಬಲು | ಸಿರಿಯನು ಬೆಳೆಯುಸು |
ದೊರಕಿಸಿ ಕೊಡುವುದು ಮೈಸೂರು || ೧ ||
ಕನ್ನಡ ನಾಡೊಳು | ಚಿನ್ನವು ದೊರಕುವ |
ಚನ್ನೆಯ ಖನಿಯದು ಮೈಸೂರು ||
ಸುಣ್ಣಗೆ ತೊದಲುವ | ಕನ್ನಡ ಮಕ್ಕಳ |
ಕನ್ನಡ ನಾಡಿದು ಮೈಸೂರು || ೨ ||
ಊಣೆಯ ನರಿಯದ | ವೀಣೇ "ಶೇಷ" ನ |
ಗಾನದ ಗುಡಿಯಿದು ಮೈಸೂರು ||
ಆನೆಗಳಿರುತಿಹ | ಕಾನನದಿಂದಲಿ |
ಕ್ಷೋಣಿಯೊಳೆಸೆವುದು ಮೈಸೂರು || ೩ ||
ಪರಿಪರಿ ನಟಿಸಿದ | "ವರದಾಚಾರ್ಯ"ನ |
ವರ ರಂಗಸ್ಥಳ ಮೈಸೂರು ||
ಮುರಲಿಯ ನೂದುತ | ತರಳರು ದನಗಳ |
ಕರೆಯುವ ಬೀಡಿದು ಮೈಸೂರು || ೪ ||
ಗಂಧದ ಮರದಡಿ | ಕಂದರು ಕುಣಿಯುವ |
ಅಂದದ ಬನವಿದು ಮೈಸೂರು ||
ಕುಂದದೆ "ವಿದ್ಯೆಯ | ಚಂದಿರ" ಮೂಡಿದ |
ಹಿಂದೂನಾಡಿದು ಮೈಸೂರು || ೫ ||

ದಿನಕರ ದೇಸಾಯಿ.

# ೮. ಮಾನವಮಿ ಪದ

ಆಶ್ವಯುಜ ಶುದ್ಧ ಮಾನವಮಿ ಬರಲೆಂದು |
ಶಾಶ್ವತದಿ ಹರಸಿದೆವು ಬಾಲಕರು ಬಂದು ||
ಈಶ ನಿಮಗತ್ಯಧಿಕ ಸುಖವ ಕೊಡಲೆಂದು |
ಲೇಸಾಗಿ ಹರಿಸಿದೆವು ಬಾಲಕರು ಬಂದು || ೧ ||

ಧನಕನಕವಸ್ತುವಾಹನವಾಗಲೆಂದು |
ಕನಕದಂಡಿಗೆ ಚೌರಿ ನಿಮಗಾಗಲೆಂದು ||
ದಿನದಿನಕೆ ರಾಜಮನ್ನಣೆ ಹೆಚ್ಚಲೆಂದು |
ಅನುದಿನವು ಹರಸಿದೆವು ಬಾಲಕರು ಬಂದು || ೨ ||

ಛತ್ರಚಾಮರತೇಜಿ ನಿಮಗಾಗಲೆಂದು |
ಅರ್ಥಿಯಿಂ ಮಾಲಕುಮಿ ನಿಮಗೊಲಿಯಲೆಂದು ||
ಪುತ್ರಪೌತ್ರರು ನಿಮಿಗೆ ಹೆಚ್ಚುತಿರಲೆಂದು |
ಅರ್ಥಿಯಿಂ ಹರಿಸಿದೆವು ಬಾಲಕರು ಬಂದು || ೩ ||

ಮಳೆಬಂದು ಬೆಳೆಬೆಳೆದು ಧರೆತಣಿಯಲೆಂದು |
ತಿಳಿಕೊಳಗಳುಕ್ಕಿ ತುರುಗಳು ಕರೆಯಲೆಂದು ||
ನಳಿನಮುಖಿಯರು ಸುಪುತ್ರರ ಪಡೆಯಲೆಂದು |
ಇಳೆಯೊಳಗೆ ಹರಿಸಿದೆವು ಬಾಲಕರು ಬಂದು || ೪ ||

ಹರಕೆಯನು ಕೇಳಿ ಹರುಷವಮಾಡಿ ನಮಗೆ |
ತರಿಸಿಕೊಡಿ ಹಚ್ಚಡವ ನಮ್ಮಯ್ಯಗಳಿಗೆ ||
ಬೆರಸಿಕೊಡಿ ಕಡಲೆಯನು ಬೆಲ್ಲವನು ನಮಗೆ |
ಸರಸತಿಯ ಕರುಣವುಂಟಾಗಿರಲಿ ನಿಮಗೆ || ೫ ||

## ೬. ಸುಗ್ಗಿಯ ಹಾಡು

ಬನ್ನಿರಿ ಬನ್ನಿರಿ, ಮಣ್ಣಿನ ಮಕ್ಕಳೆ
ರೈತರೆ, ನೇಗಿಲ ಯೋಗಿಗಳೆ !
ಕಾಡಿನ ಬಂಟರೆ, ಮುಗಿಲನ ನಂಟರೆ
ಪೈರಿನ ಗೆಳೆಯರೆ, ಭೋಗಿಗಳೆ !
ಸುಗ್ಗಿಯ ಹಬ್ಬದ ಹಾಡನು ಹಾಡಿ,
ಸುಗ್ಗಿಯ ಸೊಬಗಿನ ಕುಣಿತವಮಾಡಿ
ಬನ್ನಿರಿ, ಬನ್ನಿರಿ ಹೊಳೆಗಳ ಗೆಳೆಯರೆ
ಭೂಮಿಯು ಹಾಡಿದ ಗೀತೆಗಳೆ !
ತೆಂಕಣ ಗಾಳಿಯು ಬೀಸುತಿದೆ,
ತೆನೆಗಳ ಕಂಪನು ಸೂಸುತಿದೆ ;
ಹೊನ್ನಿನ ಹೊಲಗಳು ಮೆರೆಯುತಿವೆ,
ಚಿನ್ನದ ತೆನೆಗಳು ಕರೆಯುತಿವೆ !
ಸೊಬಗಿನ ಸುಗ್ಗಿಗೆ ಸ್ವಾಗತವೀಯಲು
ಚೋರೆಯು, ಲಾವುಗೆ, ಕೋಗಿಲೆ, ಗಿಣಿಗಳು
ಕನಸಿನ ಪದಗಳ ಹಾಡುತಿವೆ,
ಚಿಗುರಿನ ಹಸುರಿನ ವಸನವ ಹೊದೆದು,
ಹೂವಿನ ಮೊಗ್ಗಿನ ಬಿಡಗನು ತಳೆದು,
ಬನಗಳು ನಲಿನಲಿದಾಡುತಿವೆ !
ಸುಗ್ಗಿಯ ಹಾಡುತ, ಕುಣಿಯುತ ಬನ್ನಿ
ಮಣ್ಣಿನ ಮಕ್ಕಳಿರ ;
ಹಿಗ್ಗುತ ಸುಗ್ಗಿಯ ಸಗ್ಗವತನ್ನಿ
ನೆಲಸಿಲಿಯೊಕ್ಕಲಿರ !

ಕೆ. ವಿ. ಪುಟ್ಟಪ್ಪ

# ೧೦. ಬೆಳ್ಳಾವಿ ಸೋಮಪ್ಪನ ಸ್ತೋತ್ರ

ಮುಕ್ಕಣ್ಣನೆಲ್ಲರೂ ಕೊಂಡಾಡಿರೋ | ಸರ
ಣೆಕ್ಕಿ ಸೋಮೇಶನ್ನ ಕೊಂಡಾಡಿರೋ || ಪ ||

ಶಿಕ್ಕಣ್ಣ ಶಿಂಗಣ್ಣ ಶೀರಣ್ಣ |
ಲಕ್ಕಣ್ಣ ಲಿಂಗಣ್ಣ ಕಾಮಣ್ಣ ಕಾಳಣ್ಣ || ಅನು ||

ಸ್ತ್ರೀಖಾರ ಯಿಗ್ನೇಶ ಸರಣು | ಯಲ್ಲ |
ಲೋಕರಕ್ಸಕ ದ್ಯಾವ ಸರಣು ||
ಸ್ರೀಕಂಟಪುತ್ರನೆ ಸರಣು | ನಮ್ಮ |
ಯಾಕಥಂತನೆ ಸರಣು ಸರಣು || ೧ ||

ಬೆಳ್ಳಾವಿಸೋಮಪ್ಪನ್ ಜಾತ್ರೆ | ಆಗಾ |
ಬೆಳ್ಳಾನೆ ಬೆಳದಿಂಗ್ಳರಾತ್ರೆ || ನಮ್ |
ಗೆಲ್ಲಾರಿಗು ಪಾನ್ಯಾದಪಾತ್ರೆ | ಸೋಮಪ್ಗೆ |
ಮಲ್ಲಿಗೆವುವ್ವು ಬಿಲ್ಪತ್ರೆ || ೨ ||

ಯೀಬೂತಿಯರುಷಾಣಾಯಿಕ್ಕಿ | ವಳ್ಳೇ |
ಸೋಬಾನಾವಾಡ್ತಾಳೆ ಲಕ್ಕಿ ||
ವೂಬತ್ತಿದೀಪಾವನಿಕ್ಕಿ | ಆರ್ತೀಗೆ |
ತಾ ಬಿಳೇ ಕಣಗ್ಲುವ್ವ ಸಿಕ್ಕಿ || ೩ ||

ವಂಬಾಳೇ ಕಳಸಾವ ನೋಡಿ | ಅಕ್ಕಿ |
ತೊಂಬಿಟ್ಟ ನಾ ಕೀರ್ತಿಯನೀಡಿ || ಕವಡೆ |
ಸೊಂಬ್ರಾಣೆಯಿಕ್ಕಿ ಸರಣುಮಾಡಿ | ದ್ಯಾವ |
ಕ್ನಂಬಿ ಪರ್ಸಾದವ ಬೇಡಿ || ೪ ||

ಯಂಡ್ರೂ ಮಕ್ಕೆಲ್ಲಾರು ವೃಂಡೂ | ಶಾನೇ |
ಶಂಡುವ್ವೂ ಜವಣಾಮುಡ್ಕೊಂಡು ||
ವೃಂಡಾಗಡಿಕ್ಕೇಲೆಯು ಕ್ಯಂಡೂ | ಕುರಿ |
ಯಿಂಡ ಕ್ಕೇರ್ರುಸ್ತ್ತ ಬಿಟ್ಕೊಂಡು || ೫ ||
ಮುಕ್ಕಣ್ಣನೆಲ್ಲರೂ ಕೊಂಡಾಡಿರೋ ||

'ವಿದ್ಯಾರ್ಥಿ ವೈಭವ.'

## ೧೧. ವಂದೇಮಾತರಂ

ಕಾಪಿರಾಗ—ಏಕತಾಳ

ವಂದೇಮಾತರಂ |
ಸುಜಲಾಂ ಸುಫಲಾಂ ಮಲಯಜ ಶೀತಲಾಂ
ಸಸ್ಯಶ್ಯಾಮಲಾಂ ಮಾತರಂ ||

ಶುಭ್ರಜ್ಯೋತ್ಸ್ನಾ ಪುಲಕಿತಯಾಮಿನೀಂ,
ಫುಲ್ಲಕುಸುಮಿತ ದ್ರುಮದಳ ಶೋಭಿನೀಂ,
ಸುಹಾಸಿನೀಂ ಸುಮಧುರ ಭಾಷಿಣೀಂ,
ಸುಖದಾಂ ವರದಾಂ ಮಾತರಂ ||

ಸಪ್ತಕೋಟಿಕಣ್ಠ ಕಲಕಲನಿನಾದಕರಾಲೇ,
ದ್ವಿಸಪ್ತಕೋಟಿ-ಭುಜೈರ್ಧೃತಖರಕರವಾಲೇ,
ಅಬಲಾಕೇಸಮಾ ಏ ತ ಬಲೇ,
ಬಹುಬಲಧಾರಿಣೀಂ ನಮಾಮಿತಾರಿಣೀಂ,
ರಿಪುದಲವಾರಿಣೀಂ ಮಾತರಂ ||

ತುಮಿವಿದ್ಯಾತುಮಿಧರ್ಮ,
ತುಮಿಹೃದಿತುಮಿಮರ್ಮ,

ತ್ವಂಹಿಪ್ರಾಣಾಃ ಶರೀರೆ |
ಬಾಹುತೆ ತುಮಿಮಾಶಕ್ತಿ,
ಹೃದಯೆ ತುಮಿಮಾಭಕ್ತಿ,
ತೋಮಾರ ಇಪ್ರತಿಮಾಗಡಿ ಮಂದಿರೆ ಮಂದಿರೆ |
ತ್ವಂಹಿದುರ್ಗಾದಶ ಪ್ರಹರಣಧಾರಿಣೀ
ಕಮಲಾ ಕಮಲದಳ ವಿಹಾರಿಣೀ
ವಾಣೀ ವಿದ್ಯಾದಾಯಿನೀ ನಮಾ ಮಿತ್ವಾಂ
ನಮಾಮಿಕಮಲಾಂ ಅಮಲಾಂ ಅತುಲಾಂ
ಸುಜಲಾಂ ಸುಫಲಾಂ ಮಾತರಂ
ವಂದೇಮಾತರಂ.
ಶ್ಯಾಮಲಾಂ ಸರಲಾಂ ಸುಸ್ಮಿತಾಂ ಭೂಷಿತಾಂ
ಧರಣೀಂ ಭರಣೀಂ ಮಾತರಂ ||

ಶ್ರೀ ಬಂಕಿಮಚಂದ್ರ ಚಟ್ಟೋಪಾಧ್ಯಾಯ.

## ೧೨. ಹರಹರ ಮಹಾದೇವ

ದ್ವಿಪದಿ

ಹರಹರ ಮಹಾದೇವ ಶಂಭೊ !

ಬಾಲದಳದವರಾವು ಕಾಲಿಗೆರಗುವೆವು
ಬಾಲಭಟರಾವುಗಳು ಹರಕೆ ಬೇಡುವೆವು,

ಜಗದೆಲ್ಲ ಐಸಿರಿಗೆ ಈಶ್ವರನು ನೀನು
ಜಗದೆಲ್ಲ ತಾಪಗಳ ಹರಿಸುವನು ನೀನು,

ಸಜ್ಜನರ ಒಲಕೆಲ್ಲ ಮೂಲಕಾರಣನು
ದುರ್ಜನರ ಪಾಪಿಗಳ ಹಿಡಿದು ಶಿಕ್ಷಿಪನು,

ಜನಪದಗಳೇಳುವುವು ನಿನ್ನೊಂದು ದಯದಿ
ಜನತೆಗಳು ಕೂಡುವುವು ನಿನ್ನ ನಿರ್ದಯದಿ,

ಎಲ್ಲ ಕೀರ್ತಿ ಸುಮಾನ ನಿನ್ನ ಕೃಪೆಯಿಂದ
ಎಲ್ಲ ಸಿರಿ ಏಳ್ಗೆಗಳು ನಿನ್ನ ಸಂತಸವು

ಪೌರುಷವು ಫಲಿಸದು ನೀನು ಒಲಿಯದಿರೆ
ವೀರ ಬಲಸಾಹಸಗಳುರುಳಿ ಬೀಳುವುವು,

ತಾಪಸನೆ ವೈರಾಗ್ಯ ಚಕ್ರವರ್ತಿ
ತಾಪಸರ ಮರ್ಮಗಳ ನರುಹು ನಮಗೆ

ಕದಲದಿಹ ಭಕ್ತಿಯನು ಸಂಬಿಕೆಯನು
ಕದಡದಿಹ ತಿಳಿಮನದ ನಿರ್ಮಲವನು,

ಪರಹಿತವ ಚಿಂತಿಸೆ ವಿಶಾಲಬುದ್ಧಿಯನು
ಪರಸೇವೆ ಗೈಯುತಿರಲಮಿತ ಶ್ರದ್ಧೆಯನು,

ಆವ ಸಮಯದೊಳಾರು ಸಾಹ್ಯ ಬೇಡಿದರೂ
ನಾವೊಡನೆ ಸಿದ್ಧರಾಗಿರುವ ವೃತ್ತಿಯನು,
ದೇವ, ನೀನೆಮಗಿತ್ತು ಕಾಯಬೇಕೈಯ್ಯ
ನಾವು ನಿನ್ನನೆ ನಂಬಿ ಸೇವಿಸುತ್ತಿಹೆವು.
ಬಲಮದಾಂಧರ ಮುಂದೆ ಬಾಗದೊಲು ಮಾಡು
ಬಲದಲ್ಲಿ ಸಂಪದದಿ ವಿನಯವನು ನೀಡು.
ಭೀಮ ಬಲವನು ಎಮ್ಮ ಬಾಹುವಿಗೆ ಬರಿಸು
ಎಮ್ಮ ದಂಡದೊಳಿರಿಸು ಭೀಮಗದೆಯ.

ವಿ. ಸೀ.

## ೧೩. ಬನ್ನಿ !

ಎಳೆಯರೆಬನ್ನಿ ! ಗೆಳೆಯರೆಬನ್ನಿ !
ನಲಿಯುವ ಕನ್ನಡ ಬಾಲರೆಬನ್ನಿ ||

ಬನ್ನಿ, ಹುಡುಗರೇ !
ಬನ್ನಿ, ಹುಡುಗರೇ !

ಕನ್ನಡನಾಡಿನ ಕಂದರು ನಾವು !
ಪೊನ್ನಿನನಾಡಿನ ಬಾಲರು ನಾವು !
ಪುಣ್ಯದಭೂಮಿಯ ಮಕ್ಕಳು ನಾವು ||

ನಗುತಲಿಬನ್ನಿ !
ನಗುತಲಿಬನ್ನಿ !

ಹೆದರದ ಎದೆಯು ! ಬೆದರದ ಎದೆಯು !
ಮುದದಲಿ ತುಳುತುಳುಕಾಡುವ ಎದೆಯು !
ನಮ್ಮಯ ರಕ್ತವು ಕಡುಗಲಿ ಜನರ—
ರಕ್ತವು ! ಕೋಮಲ ಹೃದಯದ ಜನರ—
ಅರುಣವಾರಿಯದು ! ತರಳರೆಬನ್ನಿ ! ||

ಕುಣಿಯುತಬನ್ನಿ !
ಕುಣಿಯುತಬನ್ನಿ !

ನಾಡನು ಬೆಳಗುವ ಬಾಲರು ನಾವು !
ನಾಡಿಗೆ ಕೀರ್ತಿಯ ತರುವವರಾವು ! ||

ನೆಗೆಯುತಬನ್ನಿ !
ಚಿಗಿಯುತಬನ್ನಿ !

ಶೂರರ ಭೂಮಿಯು ಶೂರರೆಬನ್ನಿ !
ವೀರರ ವಸುಧೆಯು ವೀರರೆಬನ್ನಿ !
ಧೀರರ ಧರಣಿಯು ಧೀರರೆಬನ್ನಿ ! ||

ಬನ್ನಿ ಮುದದಲಿ !
ಬನ್ನಿ ಮುದದಲಿ !

ನಗುತಲಿ ಜಗವನು ಜಯಿಸುವ ಬನ್ನಿ !
ಜಗಕುಪಕಾರವ ನೆಸಗುವ ಬನ್ನಿ !
ಮಿಗೆತಾಯ್ನಾಡನು ಬೆಳಗುವ ಬನ್ನಿ ! ||

ಎಳೆಯರೆಬನ್ನಿ !
ಗೆಳೆಯರೆಬನ್ನಿ !

ಮು. ವೆಂಕಟಕೃಷ್ಣಪ್ಪ.

## ೧೪. ಆನಂದ

ಹೋ ! ಆನಂದಂ ! ಪೇರಾನಂದಂ !
ನೆಗೆವಾ ಕುಣಿವಾ ಮಿಗುವಾನಂದಂ !

ಓ ಶಿವಬಾರಯ್ !
ಓ ಶಿವಬಾರಯ್ !

ಬೆಳ್ಳಿಯ ಬೆಟ್ಟದ ಕೋಡಿನ ಬೀಡಿನ್,
ತೆಂಕಣ ನಾಡಿನ ಕೋಯಿಲ ಕೋಡಿನ್,
ಒಂದೇ ನೆಗೆತಂ ನೆಗೆಯುತೆ ಬಾರಯ್.

ಬಾ, ನಟರಾಜಾ,
ಬಾ, ನಟರಾಜಾ,

# ೮. ಗೋಪಾಲ.

ಹೊಸೂರು ಎಂಬ ಒಂದು ಹಳ್ಳಿ. ಅದು ಮಲೆನಾಡಿನಲ್ಲಿದೆ. ಆ ಊರಿನ ಸುತ್ತಲೂ ಬೆಟ್ಟಗಳೂ, ಕಾಡುಗಳೂ ಇವೆ. ಆ ಊರಿನಲ್ಲಿ ದೇವಮ್ಮನೆಂಬ ಗೊಲ್ಲತಿ ಆಕೆಯು ಸಿಷ್ಠಳು. ದೇವರಲ್ಲಿ ಬಹಳ ಭಕ್ತೆ. ದೇವಮ್ಮನಿಗೆ ಗಂಡನಿಲ್ಲ. ಆಕೆಯ ಗಂಡನೂ ಬಹಳ ನಿಷ್ಠನೂ, ದೇವರಲ್ಲಿ ಭಕ್ತಿಯುಳ್ಳವನೂ ಆಗಿದ್ದನು. ಅವರಿಬ್ಬರ ಭಕ್ತಿಗೆ ಮೆಚ್ಚಿ ಭಗವಂತನು ಒಂದು ಗಂಡು ಕೂಸನ್ನು ಕೊಟ್ಟಿದ್ದನು. ಆ ಹುಡುಗನಿಗೆ ಗೋಪಾಲ ನೆಂಬ ತಮ್ಮ ಮನೆತನದ ದೇವರ ಹೆಸರನ್ನಿಟ್ಟಿದ್ದರು.

ದೇವಮ್ಮನ ಸಂಸಾರವೆಂದರೆ, ಈಗ ಸದ್ಯಕ್ಕೆ ತಾನೂ, ಗೋಪಾಲನೂ ಇಬ್ಬರೇ. ಗೋಪಾಲನಿಗೆ ಆರು ಏಳು ವರ್ಷಗಳಾಗುತ್ತಾ ಬಂದಿತು. ಅವನನ್ನು ಶಾಲೆಗೆ ಕಳುಹಿಸಬೇಕೆಂದು ದೇವಮ್ಮನು ಮನಸ್ಸುಮಾಡಿದಳು. ಆದರೆ ಆ ಊರಿನಲ್ಲಿ ಶಾಲೆಯೇ ಇರಲಿಲ್ಲ. ಶಾಲೆಯು ಒಂದೂವರೆ ಮೈಲು ಗಳ ದೂರದಲ್ಲಿದ್ದ ಅಗ್ರಹಾರದಲ್ಲಿದ್ದಿತು. ಹೊಸೂರಿನಿಂದ ಅಲ್ಲಿಗೆ ಹೋಗ ಬೇಕಾದರೆ ಒಂದು ದೊಡ್ಡ ಕಾಡನ್ನೇ ದಾಟಿ ಹೋಗಬೇಕಾಗಿದ್ದಿತು. ದೇವಮ್ಮನು ತನ್ನ ಮಗನು ವಿದ್ಯಾವಂತನಾಗಬೇಕೆಂದು ಒಂದು ದೊಡ್ಡ ಆಶೆಯನ್ನಿಟ್ಟುಕೊಂಡಿದ್ದಳು. ಆದರೆ ಪ್ರತಿನಿತ್ಯದಲ್ಲಿಯೂ ತನ್ನ ಚಿಕ್ಕ ಮಗನು ಅಷ್ಟು ದೂರ ಕಾಡಿನಲ್ಲಿ ನಡೆಯಬಲ್ಲನೇ ಎಂಬ ಸಂಶಯ. ಆ ಊರಿನಲ್ಲಿ ಗೋಪಾಲನ ಜೊತೆಗೆ ಯಾರೂ ಇಲ್ಲ! ದೇವರಲ್ಲಿ ತನ್ನ ಕಷ್ಟ ವನ್ನು ಹೇಳಿಕೊಳ್ಳುತ್ತಿದ್ದ ದೇವಮ್ಮನಿಗೆ ಧೈರ್ಯ ಬಂದಿತು. ಮರುದಿನವೇ ಗೋಪಾಲನನ್ನು ಶಾಲೆಗೆ ಕರೆದುಕೊಂಡು ಹೋಗಿ ಉಪಾಧ್ಯಾಯರ ವಶಕ್ಕೆ ಬಾಲಕನನ್ನು ಒಪ್ಪಿಸಿ ಬಂದಳು.

ಸಂಜೆಯು ಬರಲಾಗಿ ಗೋಪಾಲನು ಶಾಲೆಯಿಂದ ಹೊಸೂರಿಗೆ ಹೊರಟನು. ಅಗ್ರಹಾರವನ್ನು ಬಿಟ್ಟು ಒಂದು ಫರ್ಲಾಂಗಿನ ದೂರದಲ್ಲಿ

ಕಾಡು ಪ್ರಾರಂಭವಾಯಿತು. ಗೋಪಾಲನು ಚಿಕ್ಕವನು. ಕಾಡಿನಲ್ಲಿ ನಿಶ್ಶಬ್ದವಾಗಿದ್ದರಿಂದ ಗೋಪಾಲನಿಗೆ ಭಯವುಂಟಾಯಿತು. ಭಯದಿಂದ ಅಳುವುದಕ್ಕೆ ತೊಡಗಿದನು. ಆದರೇನು? ಯಾರುತಾನೇ ಅವನನ್ನು ಸಮಾಧಾನಗೊಳಿಸಬಲ್ಲರು ಅಂತು ಮಧ್ಯೆ ಮಧ್ಯೆ ಧೈರ್ಯವನ್ನು ತಂದು ಕೊಂಡು ಹೊಸೂರಿಗೆ ಬಂದು ಮನೆಗೆ ಸೇರಿದನು.

ಗೋಪಾಲನು ಮನೆಗೆ ಬರುವಷ್ಟರಲ್ಲಿ ದೇವಮ್ಮನು ಮಗನಿಗೆಂದು ಹಾಲನ್ನು ಕರೆದು ಇಟ್ಟಿದ್ದಳು. ಗೋಪಾಲನಿಗೆ ಅದೊಂದೂ ಬೇಡವಾಗಿ ದ್ದಿತು. ಮಗನು ಸಪ್ಪಗಿದ್ದು ಅವನ ಕಣ್ಣುಗಳು ಕೆಂಪಗಿದ್ದುದನ್ನು ನೋಡಿ ದೇವಮ್ಮನು ಸಮಾಧಾನದಿಂದ ಮಗನ ಕಷ್ಟವೇನೆಂಬುದನ್ನು ತಿಳಿದಳು. ಜೊತೆಯಲ್ಲಿ ಯಾರೂ ಬರದಿದ್ದಲ್ಲಿ ಗೋಪಾಲನು ಶಾಲೆಗೆ ಹೋಗುವುದಿಲ್ಲ ವೆಂದು ದೇವಮ್ಮನು ತಿಳಿದಳು. ದೇವಮ್ಮನಿಗೆ ಯೋಚನೆ ಹುಟ್ಟಿತು. ಪಾಪ ಬಡಗೊಲ್ಲತಿ. ಮನೆಯಲ್ಲಿ ಗಂಡಸರಿಲ್ಲ. ನಾಲ್ಕು ಹಸುಗಳನ್ನು ಕಟ್ಟಿ ಹಾಲುಮೊಸರು ಬೆಣ್ಣೆಯನ್ನು ಮಾರಿ ಜೀವಿಸಬೇಕು. ಗೋಪಾಲನೊಡನೆ ಶಾಲೆಗೆ ದೇವಮ್ಮನು ಹೋಗಲಾದೀತೆ?

ಆದರೆ ದೇವಮ್ಮನು ಧೈರ್ಯ ಕೆಡಲಿಲ್ಲ. ತನ್ನನ್ನು ಸಲಹಲೆಂದು ಭಗವಂತನು ಗೋಪಾಲನನ್ನು ಕೊಟ್ಟಿದ್ದನು. ಆ ಗೋಪಾಲನನ್ನು ಕಾಪಾಡಲು ಆ ಭಗವಂತನೇ ಬರಬೇಕೆಂದು ದೇವಮ್ಮನು ತನ್ನಲ್ಲಿ ತರ್ಕಿಸಿಕೊಂಡು, ರಾತ್ರಿಯೆಲ್ಲವೂ ದೇವರನ್ನೇ ಪ್ರಾರ್ಥಿಸುತ್ತಾ ಕಾಲವನ್ನು ಕಳೆದಳು.

ಮರುದಿನ ಬೆಳಗಾಯಿತು. ಗೋಪಾಲನು ಶಾಲೆಗೆ ಹೊರಡುವ ಹೊತ್ತಾಯಿತು. ದೇವಮ್ಮನು "ಅಪ್ಪಾ ಗೋಪಾಲ, ಶಾಲೆಗೆ ಹೊರಡು, ಹೊತ್ತಾಯಿತು" ಎಂದಳು. ಗೋಪಾಲನು "ಜೊತೆಯಿಲ್ಲದೆ ನಾನು ಹೋಗುವುದಿಲ್ಲ" ಎಂದು ಹಟವನ್ನು ಹಿಡಿದನು. ಅದಕ್ಕೆ ದೇವಮ್ಮನು "ಅಪ್ಪಾ-ಗೋಪಾಲ, ನಿನ್ನ ಅಣ್ಣನು ಊರ ಹೊರಗೆ ದನಗಳನ್ನು

ಜೋಕು ದೀಪಾವಳಿಯಂಜಿನ ಸೌವಿ |
ಹಾಕು ಚಾಮುಂಡಿಗೆ ಹಣ್ಣಿನ ದೌಸ ||
ಹುಯ್ಯೋ ದೀಪ ಸಹಸ್ರಕೆ ಹುಯ್ಯೋ |
ಹುಯ್ಯೋ ಭಾವ ಬನ್ನಿಯು ಕೋಲ || ೪ ||

ಬಿಲ್ಲದ್ದು ಬಾಗಲು ಹೋತನ ಹಿಂದೆ |
ಎಲ್ಲಿಮುಂದೇವರು ಹತ್ತಿತು ತೇರ ||
ವಾಲಾಡುತಿತ್ತಲೆ ಪರಿಷೆಗೆ ಬಾರೋ |
ತೇಲಾಡಿದಾಮೋಡವೆಲ್ಲಿದೆ ನೋಡೋ ||
ತುಯ್ಯೋ ತುಯ್ಯೋ ತೇರಿನ ಮಿಣಿಯ |
ಹುಯ್ಯೋ ಹುಯ್ಯೋ ದೇವರ ಕೋಲ || ೫ ||

ಮಡಕೆಯಲಾಡಲು ಮೀಸಿನಬಾಲ |
ಮೃಡನವ ತಪಸಲಿ ಕೂರುವಕಾಲ |
ಕಾಡುವ ಮಾಗಿಗೆ ಧಾವಳಿಜೋಡಿ |
ಜೋಡುಕಗ್ಗಂಬಳಿ ಕಾಮನ ದಿನಕೆ ||
ಕಾಯೋ ಕಾಯೋ ಮಾಗಿಯ ಬೆಂಕಿ |
ಹುಯ್ಯೋ ಹುಯ್ಯೋ ಭಾಗ್ಯದ ಕೋಲ || ೬ ||

ಶ್ರೀ ಹೊಯಿಸಳ.

## ೧೬. ಕಾಳಗದ ಪದ

ಕಾಳೆ, ಹರೆ, ಕೊಂಬುಗಳ
ಏಳೆ, ಮೊಳಗಿ, ಏಳೆ,
ನಾಡುಗಳ ಕುಳಗಳನು
ಕೂಡಿಕೊಳ ಹೇಳೆ.

ಬಡವೆ, ನನ್ನಲ್ಲೇನೂ ಇಲ್ಲ, ಶಾಲೆಗೆ ಕರೆದುಕೊಂಡು ಹೋಗುತ್ತಿರುವ ನಿನ್ನ ಅಣ್ಣನನ್ನು ಕೇಳು, ಕೊಡುತ್ತಾನೆ" ಎಂದು ಹೇಳಿ ಕಳುಹಿಸಿದಳು. ಊರಬಾಗಿಲಲ್ಲಿ ಗೋಪಾಲನ ಅಣ್ಣನು ಸಿದ್ಧವಾಗಿದ್ದನು. ಅವನಲ್ಲಿ ತನ್ನ ಅಭಿಲಾಷೆಯನ್ನು ಗೋಪಾಲನು ಹೇಳಿಕೊಂಡನು. ಅದಕ್ಕೋಸ್ಕರವೆಂದು ಗೋಪಾಲನು, ತನ್ನ ತಮ್ಮನಿಗೆ ಒಂದು ಚಿಕ್ಕ ಮಡಿಕೆಯ ತುಂಬ ಗಟ್ಟಿಯಾದ ಕೆನೆಮೊಸರನ್ನು ತಂದುಕೊಟ್ಟನು.

ಅದನ್ನು ತೆಗೆದುಕೊಂಡು ಹೋಗಿ ಗೋಪಾಲನು ತನ್ನ ಉಪಾಧ್ಯಾಯರಿಗೆ ಕೊಟ್ಟನು. ಉಪಾಧ್ಯಾಯರಿಗೆಂದು ಇತರ ಬಾಲಕರು ಹೆಚ್ಚು ಬೆಲೆಯುಳ್ಳ ಉಡುಗೆರೆಗಳನ್ನು ತಂದಿದ್ದರು. ಆದಾಗ್ಯೂ ವಿಶ್ವಾಸದಿಂದ ತಂದು ಕೊಟ್ಟಿರುವ ಈ ಅಲ್ಪ ಬೆಲೆಯುಳ್ಳ ಮೊಸರನ್ನು ಅವರು ತಿರಸ್ಕರಿಸಲಿಲ್ಲ. ಎಲ್ಲರಿಗೂ ಅಲ್ಲಿಯೇ ಅದನ್ನು ಹಂಚಬೇಕೆಂದು, ಸ್ವಲ್ಪವೇ ಇದ್ದದ್ದರಿಂದ ಒಂದು ಚಮಚಾವಿನಲ್ಲಿ ಎಲ್ಲರಿಗೂ ಸ್ವಲ್ಪ ಸ್ವಲ್ಪವಾಗಿ ಹಂಚಿದರು. ಆ ಮೊಸರು ಅವರು ಎಂದೆಂದಿಗೂ ಕಂಡಿರದಷ್ಟು ರುಚಿಯುಳ್ಳದ್ದಾಗಿದ್ದಿತು. ಇದಕ್ಕೂ ಆಶ್ಚರ್ಯಕರವಾದ ಒಂದು ಸಂಗತಿಯು ನಡೆಯಿತು. ಉಪಾಧ್ಯಾಯರು ಕೊನೆಯವನಿಗೆ ಮೊಸರನ್ನು ಕೊಡುವಾಗ ಮಡಿಕೆಯು ಖಾಲಿಯಾಗುತ್ತಿತ್ತು. ಕೂಡಲೆ ಅದರ ತುಂಬ ಮೊಸರು ತುಂಬಿಕೊಳ್ಳುತ್ತಿತ್ತು. ಹೀಗೆಯೇ ಎಲ್ಲರಿಗೂ ಹೊಟ್ಟೆ ತುಂಬಿ ಸಾಕಾಗುವವರೆಗೂ ಚಿಕ್ಕ ಮಡಿಕೆಯಲ್ಲಿ ಮೊಸರು ತುಂಬುತ್ತಿತ್ತು.

ಉಪಾಧ್ಯಾಯರಿಗೆ ಈ ಮೊಸರಿನ ರುಚಿ ಮತ್ತು ಆ ಮಡಿಕೆಯ ಮಹತ್ವ ಇವೆರಡೂ ಆಶ್ಚರ್ಯವನ್ನುಂಟುಮಾಡಿದವು. "ಅಯ್ಯಾ, ಮಡಿಕೆಯನ್ನೂ ಮೊಸರನ್ನೂ ನಿನಗೆ ಯಾರು ಕೊಟ್ಟರು" ಎಂದು ಉಪಾಧ್ಯಾಯರು ಗೋಪಾಲನನ್ನು ಕೇಳಲಾಗಿ, ಗೋಪಾಲನು "ಗುರುಗಳೇ, ಇವನ್ನು ನಮ್ಮ ಅಣ್ಣನು ಕೊಟ್ಟ" ನೆಂದು ಹೇಳಿದನು.

ಓಡ ಕೊಚ್ಚುತ ಕಡಲು
ಬರುವಂತೆ ಬನ್ನಿ.
ಓಡಿ ಬನ್ನಿ, ಓಡಿ ಬನ್ನಿ,
ಓಡಿ ಓಡಿ ಬನ್ನಿ,
ಗೌಡ, ಕುಳ ; ಆಳು, ದಣಿ ;
ನಾಡ ದಳ ಬನ್ನಿ.

ಬಂದರಣ್ಣಾ, ಬಂದರಣ್ಣಾ,
ಕಿಕ್ಕಿರಿದು ಸೆರೆದು,
ಚೆಂದದಲಿ ಹೂವುಗರಿ
ಸಿಕ್ಕಿ ತಲೆ ಮೆರೆದು-
ಹಿರಿ, ಕತ್ತಿ! ಇರಿ, ಸುರಗಿ!
ಸರಿ, ಮುಂದೆ, ಆಳು!
ಅರಿಯೆದೆಯ ಜಿರಿ, ಕಾಳೆ!
ತರಿ, ಕೊಲ್ಲ ಹೇಳು!

ಶ್ರೀ.

## ೧೭. ರಂಗಪ್ಪ ಬಂದವ್ನೆ

ರಂಗಪ್ಪ ಬಂದವ್ನೆ ಬಾಕ್ಲಲ್ಲಿ ನಿಂದವ್ನೆ |
ಶೃಂಗಾರದಿಂದವ್ನೆ ||
ತೆಂಗಿನ ಕಾಯ್ಬಾಳೆ ಹಣ್ತಂದು ನೋಡಿರೊ |
ಪೊಂಗೊಳಲೂದ್ತಾನೆ || ಪ ||
ನಾಕ್ಮೆಕ್ಳನ್ನೆತ್ತವ್ನೆ ನೀರೊಳ್ಗೆ ನಿಂದವ್ನೆ |
ನಾಕ್ಕಯ್ಯ ಪಡೆದವ್ನೆ ||

ಇಕ್ಕೆಲದಲಿ ಶಂಖು ಚಕ್ರವ ಹಿಡಿದವ್ನೆ |
ರಾಕ್ಸಸ್ನ ಮೆಟ್ಯವ್ನೆ || ೧ ||

ಘಟ್ಟಿ ಬೆನ್ನಿನ ಮೇಲೆ ಬೆಟ್ಟವ ಹೊತ್ತವ್ನೆ |
ಘಟ್ಟಿಗದೇ ಹಿಡಿದವ್ನೆ ||
ಮಟ್ಟಸವಾದ ನಾಕ್ಕಾಲಲ್ಲಿ ನಿಂತವ್ನೆ |
ಸಿಟ್ಟಿಲ್ಲ ನಗುತಾನೆ || ೨ ||

ಮೊಳದುದ್ದ ಮೂಗ್ಮೇಲೆ ಭೂಮಿಯ ಹೊತ್ತವ್ನೆ |
ಬೆಳಶವ್ನೆ ಕ್ವಾರೆಹಲ್ಲ ||
ತೊಳಲಿಬಳಲ್ಪ ನಮ್ಮಪ್ಪ ರಂಗಪ್ಪನು |
ಎಳೆನಗೆ ನಗುತಾನೆ || ೩ ||

ಮೂಡ್ಯವ್ನೆ ಕಂಬ್ದಲ್ಲಿ ನರಶಿಂಹನಾಗವ್ನೆ |
ಹಿಡಿದವ್ನೆ ದೊಡ್ರಾಕ್ಸಸ್ನ ||
ದೊಡ್ತುಗರಲ್ಹೊಟ್ಟೆಯ ಬಗಿತವ್ನೆ ಶಿಗಿತವ್ನೆ |
ಕೊಡ್ತೀನ್ವರವ ನೆಂತವ್ನೆ || ೪ ||

ಗಿಡ್ಡ ಹಾರುವನಂತೆ, ಮೂರ್ಹೆಜ್ಜೆ ಭೂಮಿಯ |
ನಡ್ಡಡ್ಡಾಗಳೆದವ್ನೆ ||
ಪಾಡ್ಯಾದ ಹಬ್ದಲ್ಲಿ ಬಲಿಯ ಕರ್ತ್ರಾನೆ |
ಬೇಡಿದ್ದ ಕೊಡುತಾನೆ || ೫ ||

ಮೈಯಲ್ಲಿ ಜನಿವಾರ ಪೀತಾಂಬ್ರ ತೊಟ್ಟವ್ನೆ |
ಜಯ ಜಯ ವೆಂತವ್ನೆ ||
ಕೈಯಲ್ಲಿ ಹಿಡಿದವ್ನೆ ಗಂಡು ಗೊಡ್ಲಿಯ ನೋಡೊ |
ಭಯವಿಲ್ಲ ಕೈ ಮುಗಿಯೊ || ೬ ||

ಶಿವನ ಬಿಲ್ಮುರಿದವ್ನೆ ರಾವ್ಣನ್ನ ತರಿದವ್ನೆ |
ಭುವಿಯೆಲ್ಲ ವಾಳ್ಯವ್ನೆ ||
ಅವನಿಯ ಮಗಳಿಂದ ಲೋಡಗೂಡಿ ನಿಂದವ್ನೆ |
ತವಕದಿ ನೋಡಿರೆಲ್ಲಾ || ೭ ||

ಮಡುವಿಗೆ ಧುಮ್ಕಿ ಕಾಳಿಂಗನ ಮೆಟ್ಯವ್ನೆ |
ಹಿಡಿದವ್ನೆ ಹೊಂಗೊಳಲಾ ||
ಮಡದಿಯ ಮಾವನ ಕಾಪಾಡಿ ನಿಂದವ್ನೆ |
ಕಡುರೂಪವಂತ ನಮ್ಮಾ || ೮ ||

ಸುತ್ತಲು ಸುಳಿಯುವ ಚಿತ್ತವ ತುಳಿದವ್ನೆ |
ಚಿತ್ತಲಿ ನಿಂತವ್ನೆ |
ಕೃತ್ತಿವಾಸನ ಕೈಯೊಳಿಂಬಾಗಿ ನಿಂದವ್ನೆ |
ಉತ್ತುಮು ಬೌದ್ಧ ನಮ್ಮಾ || ೯ ||

ಕುದುರೆಯ ಮ್ಯಾಲ್ಕುಂತು ಕಾಲಿಂದ ದುರುಳರ |
ನೊದಿಯಾಕೆ ಹೊಂಟವ್ನೆ ||
ಮುದನಪ್ಪ ನಮ್ಮಾ ಮೂಂಗಿರಿಯೊಡೆಯನ |
ಪಾದಕಮಲಕೆ ಎರಗೊ ||೧೦ ||

ಮುದ್ದು ರಂಗಪ್ಪಗೆ ಪೊಂಗಲು ನೈವೇದ್ಯ |
ಶಿದ್ಧಮಾಡಿಡಿರಯ್ಯ ||
ಬದ್ಧವು ಅವನಮ್ಮ ಕಾಯೋದು ಸಟೆಯುಲ್ಲ |
ಎದ್ದೆದ್ದು ತಲೆಬಾಗೊ || ೧೧ ||

ರಾಮನು ಅವನೇ ಕಾಮನಪ್ಪ ನಿಸ್ಸೀಮ |
ನಮ್ಮೀ ರಂಗಪ್ಪನೆ ||
ರಾಮದಾಸನ ಮನದೊಳು ಮನೆ ಮಾಡ್ಯವ್ನೆ |
ಪಾಮರ ವರದನೆಂಬೊ || ೧೨ ||

ಕೆ. ರಾಮಸ್ವಾಮಯ್ಯಂಗಾರ್

# ೧೮. ಮಾವಳೆಗಳ ಗೀತ

ಹರ ಮುಹದೇವ್ ಹರ ಮುಹದೇವ್
ಹರ ಮುಹದೇವ್ ಹರ ಮುಹದೇವ್
ಹರ ಮುಹದೇವ್ ಹರ ಮುಹದೇವ್
ಹರ ಹರ ಹರ ಹರ ಹರ ಮುಹದೇವ್.

ಶಿವರಾಯನ ಮುಹದೇವನು ಒಮ್ಮೆ
ಬಾರೆಂದು ಬಳಿಗೆ ಕರೆಯಿಸುತ
ಶಿವ ನೀ ಧರ್ಮವ ಸಲಹಲು ಬೇಗನೆ
ಭಾರತಭೂಮಿಗೆ ನಡೆಯೆಂದ.
ಹರ ಮುಹದೇವ್ ಹರ ಮುಹದೇವ್
ಹರ ಹರ ಹರ ಹರ ಹರ ಮುಹದೇವ್.

ಅಂಬಾಭವಾನಿ ಲೋಕದ ತಾಯಿ
ಶಿವನನು ಅಂದು ಹರಸಿದಳು
ಇಂಬಾಗಿ ವಿಜಯಲಕ್ಷ್ಮಿಯು ಸಂತತ
ಬವರದಿ ನಿನ್ನಲಿ ನಿಲಲೆಂದು.
ಹರ ಮುಹದೇವ್ ಹರ ಮುಹದೇವ್
ಹರ ಹರ ಹರ ಹರ ಹರ ಮುಹದೇವ್.

ಶಿವನಂದು ನಮ್ಮ ಭೂಮಿಗೆ ಬಂದ
ಹರನಾಣತಿಯನು ನಡೆಸಲಿಕೆ ;
ಅವನಾಣತಿಯನು ನಡೆಸಿದ ಮನುಜಗೆ
ದೊರೆವುದು ಸುಖ ಇಹಪರಗಳಲಿ.
ಹರ ಮುಹದೇವ್ ಹರ ಮುಹದೇವ್
ಹರ ಹರ ಹರ ಹರ ಹರ ಮುಹದೇವ್.

ಶಿವರಾಯ ನಮ್ಮ ಶಿವರಾಯ,
ಹಗೆ ಮುಗಿಲಿಗೆ ಇವ ಪವಮಾನ;
ಬವರದೊಳವನಾ ಉಜ್ವಲತೇಜವ
ಬಗೆವುದು ಸಾಧ್ಯವೆ ಮನುಜರಿಗೆ ?
ಹರ ಮಹದೇವ್ ಹರ ಮಹದೇವ್
ಹರ ಹರ ಹರ ಹರ ಹರ ಮಹದೇವ್.

ಶಿವರಾಯ ನಮ್ಮ ಶಿವರಾಯ,
ಹಗೆಗಳಿಗಿವನು ಜವರಾಯ,
ಶಿವರಾಯನ ಹೆಸರುಸುರಿದ ಮನುಜಗೆ
ಒಗೆವುದು ನೆರೆ ತುಂಬಿದ ತೇಜ.
ಹರ ಮಹದೇವ್ ಹರ ಮಹದೇವ್
ಹರ ಹರ ಹರ ಹರ ಹರ ಮಹದೇವ್.

ಶಿವರಾಯನ ಆಳ್ವಿಕೆಯೇ ಆಳ್ವಿಕೆ,
ಅವನೂಳಿಗವೇ ಊಳಿಗವು ;
ಶಿವರಾಯನ ಆಣತಿಯಲಿ ನಡೆದಗೆ
ಸವನಿಸುವುದು ಸುಖ ಇಹಪರದಿ.
ಹರ ಮಹದೇವ್ ಹರ ಮಹದೇವ್
ಹರ ಹರ ಹರ ಹರ ಹರ ಮಹದೇವ್.

ಭಾರತ ಭೂಮಿಯ ಸಲಹಲಿಕೆಂದು
ಶಿವರಾಯ ಬಂದ ಶಿವರಾಯ ;
ಆರಿಯ ಧರ್ಮವ ನಿಲಿಸಲಿಕೆಂದು
ಶಿವರಾಯ ಬಂದ ಶಿವರಾಯ.
ಹರ ಮಹದೇವ್ ಹರ ಮಹದೇವ್
ಹರ ಹರ ಹರ ಹರ ಹರ ಮಹದೇವ್

ಶಿವರಾಯ ಶತ್ರುರಾಯರ ಗಂಡ ;
  ಶಿವರಾಯ ಹಗೆಯ ಜವರಾಯ ;
ತವಕಿಪ ಮ್ಲೇಚ್ಛರ ಕತ್ತಲ ತಂಡಕೆ
  ಶಿವರಾಯ ಚಂಡಮಾರ್ತಾಂಡ
ಹರ ಮಹದೇವ್ ಹರ ಮಹದೇವ್
ಹರ ಹರ ಹರ ಹರ ಹರ ಮಹದೇವ್.

ಶಿವರಾಯ ಸುಖದಿ ಸಂತತ ಬಾಳಲಿ ;
  ಶಿವರಾಯ ನಮ್ಮ ಶಿವರಾಯ
ಭವನಾತಗೆ ಆಯುಷ್ಯವ ನೀಡಲಿ,
  ಭವ ನೀಡಲಿ ನಿಜವಿಜಯವನು.
ಹರ ಮಹದೇವ್ ಹರ ಮಹದೇವ್
ಹರ ಹರ ಹರ ಹರ ಹರ ಮಹದೇವ್.

ಹರ ಮಹದೇವ್ ಹರ ಮಹದೇವ್
  ಹರ ಮಹದೇವ್ ಹರ ಮಹದೇವ್
ಹರ ಮಹದೇವ್ ಹರ ಮಹದೇವ್
  ಹರ ಹರ ಹರ ಹರ ಹರ ಮಹದೇವ್.

ಶ್ರೀನಿವಾಸ-

## ೧೯. ಅಜ್ಜನಕೋಟೆ ನಮ್ಮಹರಟೆ

ಅಜ್ಜ : ಉಲಿಯುತ ನಲಿಯುತ ನಾಡನುಬೆಳಗಿ
ತೊಳಲುತ ಗಿರಿಕಾನನಗಳಿಗಾಗಿ
ಕಿಲಕಿಲರವದೊಳು ಹರುಷದಿಹಾಡುವ

ಕಲಿಗಳೆ ನೀವಾರು ?
ನಿಮ್ಮಯ
ನೆಲೆಪಯಣವಿದೆಲ್ಲಿ ?

**ಸ್ಕೌಟುಗಳು :** ಶಾಲೆಯೊಳೊಮ್ಮೆ ಪಾಠವಕಲಿಯುತ
ಕಾಲವಕಳೆಯುತ ಶಿಬಿರದೊಳೊಮ್ಮೆ
ಲೀಲೆಯೊಳೆಮ್ಮಯ ನಾಯಕಕೃಷ್ಣನ
ಬಾಲಭಟರು ನಾವು
ಅಜ್ಜಾ !
ಬಾಲಭಟರು ನಾವು

**ಅಜ್ಜ :** ಕರದಲಿ ದಂಡವಿದಚ್ಚರಿಯೇನು ?
ಧರಿಸಿಹ ವಸನಗಳೈಸಿರಿಯೇನು ?
ಭರದಲಿ ಸಾರುವ ಸೋಜಿಗವೇನಿದ
ಸೊರೆಯಿರಿ ಮಕ್ಕಳಿರಾ
ಎನಗಿದ
ಸೊರೆಯಿರಿ ಮಕ್ಕಳಿರಾ

**ಸ್ಕೌಟುಗಳು :** ದಂಡವ ಧರಿಸಿಹ ಧೀರರು ನಾವು
ದ್ದಂಡತನದ ಕಲಿ ಶೂರರು ನಾವು
ಭಂಡರ ಪುಂಡನು ಖಂಡಿಪ ವೀರರು
ಗಂಡುಗಲಿಗಳಜ್ಜ
ಈ ಭೂ
ಮಂಡಲದೊಳಗಜ್ಜ

**ಅಜ್ಜ :** ಅಂದದ ಚಂದದ ಕಂದರೆ ನಿವಾ
ನಂದದೆ ಮಂದಿರದೊಳಗಾಡದಲೆ

ಚಂದವೆ ನಿಮಗಿದು ಶಿಬಿರಕೆ ಪೋಗಲು
ಸೊಂದಪಳಲೆ ಮಾತೆ ?
ಮುದ್ದಿನ
ಕಂದರೆ ನಿಮ್ಮಾತೆ

ಸ್ಕೌಟುಗಳು : ಮಾತೆಯು ಯಮಗೀ ಮೈಸೂರ್ನಾಡು
ಪ್ರೀತಿಯ ಮಾತೆಯ ನಿಜದೊಳು ನೋಡಃ
ಮಾತೆಯ ಸೇವೆಯ ಪ್ರೀತಿಯೊಳೆಸಗಲು
ಖ್ಯಾತಿಯು ಕಾಣಜ್ಜ !
ನಮಗಿದು
ನೀತಿಯು ಕಾಣಜ್ಜ !

ಅಜ್ಜ : ನಿಮ್ಮಯ ಮಂಡಲಿ ನಡೆಸುವರಾರು ?
ಸುಮ್ಮಾನದಿ ಪರಿಪೋಷಕರಾರು ?
ಸಮ್ಮತ ಸಂಸ್ಥೆಯ ಸಾರವ ಪೇಳ್ರಿ
ಇಮ್ಮಡಿಯಾಗಲದು !
ಸಂಸ್ಥೆಯು
ಮುಮ್ಮಡಿಯಾಗಲದು !

ಸ್ಕೌಟುಗಳು : ಪರಿವಿಡಿ ನಡೆಸರು ಶ್ರೀಯುವರಾಜರು
ಪರಿಪೋಷಕರೇ ಶ್ರೀ ವರ ಕೃಷ್ಣ
ನೆರೆಸಂದವು ವರುಷಗಳಾರೇಳು
ಭರದೀ ಮಂಡಲಿಗೆ
ಕೇಳಜ್ಜಯ್ಯಾ
ವರುಷಗಳಾರೇಳು

ಅಜ್ಜ : ನೀವೇ ಧನ್ಯರು ಈ ಜಗದೊಳಗೆ
ನೀವೇ ಮಾನ್ಯರು ಈ ನಾಡೊಳಗೆ
ದೇವನು ಕರುಣದಿ ಧರೆಯೊಳು ನಿಮ್ಮನು
ಕಾವನು ಮಕ್ಕಳಿರಾ
ಶ್ರೇಯವ
ನೀವನು ಮಕ್ಕಳಿರಾ

ಸ್ಕೌಟುಗಳು : ಕಡುತವಕದೊಳೆಮ್ಮೊಡೆಯುನನುಜ್ಞೆಯ
ಬಿಡದಲೆ ಸಾಧಿಸಿ ಪರಮಾನಂದದಿ
ಸುಡಿಯದೆ ಪುಸಿಯನು ಪರಹಿತ ಕಾರ್ಯದಿ
ನಡುವನು ಕಟ್ಟಿಹೆವು
ಮನದೊಳು
ಗುಡಿಯನು ಕಟ್ಟಿಹೆವು

ಎಲ್ಲರೂ : ಮಂಗಳವಾಗಲಿ ಮೈಸೂರ್ನಾಡಿಗೆ !
ಮಂಗಳವಾಗಲಿ ಮೈಸೂರರಸಗೆ !!
ಮಂಗಳವಾಗಲಿ ಮೈಸೂರ್ ಸ್ಕೌಟಿಗೆ !!!
ಮಂಗಳ ಮಂಗಳವು
ಜಯ ಜಯ
ಮಂಗಳ ಮಂಗಳವು !

ಡಿ. ಗಿಡ್ಡಬಸಪ್ಪ.

## ೨೦. ಮಂಗಳ

ಇಂಗ್ಲಿಷ್ ನೋಟು

ಕಾಯೌ ಶ್ರೀಗೌರೀ ಕರುಣಾಲಹರೀ |
ತೋಯಜಾಕ್ಷೀ ಶಂಕರೀಶ್ವರೀ || ಪ ||

ವೈಮಾನಿಕ ಭಾವಮಾರ್ಚಿತ ಕೋಮಲತರಪಾದೇ |
ಸೀಮಾತಿಗ ಭೂಮಾಸ್ಪದೆ ಕಾಮಿತಫಲದೇ ||೧||

ಶುಂಭಾದಿಮ ದಾಂಭೋನಿಧಿ ಕುಂಭಜನಿಭೆದೇವೀ |
ಜಂಭಾಹಿತ ಸಂಭಾವಿತೆ ಶಾಂಭವಿ ಶುಭವೀ ||೨||

ಶ್ಯಾಮಾಲಿಕೆ ಚಾಮುಂಡಿಕೆ ಸೋಮಕುಲಜ ಕೃಷ್ಣ |
ನಾಮಾಂಕಿತ ಭೂಮೀಂದ್ರಲ ಲಾಮನ ಮುದದೆ ||೩||

## ಉರ್ದು ಭಾಷಾಂತರ

ಆಲಮ್ ಕೆ ಆಖಾ ಸೊಬ್ ಸೆ ಆಲಾ |
ಹಾ ಫೀಜ್ ಹ್ಯೆ ತೂ ಬಾದಶಾ ಹೊಣ್ಕಾ ||ಪ||

ತೂ ಖಾಲಿಖ್ ತೂ ರಾಜಿಖ್ ಖಾದಿರೆ ಬೆ ಹಂತಾ |
ರಹ್ಮಾಣ್ ಹ್ಯೆ ತೂ ಸುಬ್‌ಹಾಣ್ ಹ್ಯೆ ತೂ ಬಾರಿ ತ ಆಲಾ ||೧||

ಜಿನ್ನಾ ತೊ ಬಶರ್ ಹ್ಯೆವಾಣ್ ಹೂರೊಮಲಕ್ ಘುಲ್ಮಾಣ್ |
ಕೊಃಸಾರ್ ಭಿ ಅಷ್ಜಾರ್ ಭಿ ತೇರೆ ಸನಾ ಖಾಣ್ ||೨||

ಜಂ ಷೌಕತ್ ಕೈ ಹಷ್ಮತ್ ಮುಂತಾಜ್ ಕಿಷ್ವರಾಜ್ |
ಫರ್‌ಮಾಣ್ ದಹೆ ಮ್ಯೆಸೂರ್ ಹ್ಯೆ ಷಾಹೊಣ್ ಕಾ ಸರ್‌ತಾಜ್ ||೩||

ಎ. ಆರ್. ಕೆ. ಮುಮ್‌ತಾಜ್.

## ಸಂಪೂರ್ಣ



# ಘ ರ್ಜ ನೆ

ಕೂಗುವುದು ಬಾಲಕರ ಸ್ವಭಾವ. ಪ್ರಪಂಚವೇ ಧ್ವನಿಪೂರ್ಣ ವಾಗಿದೆ. ಜೀರ್ಣವಿಶ್ವವನ್ನು ವಿನಾಶಮಾಡಿ, ನೂತನ ವಿಶ್ವವನ್ನು ಸೃಷ್ಟಿ ಸುವ ಅಗಾಧ ಸಂದರ್ಭದಲ್ಲಿ ರುದ್ರನು ತನ್ನ ನಿರ್ಮಾಣಕಾರಕವಾದ ತಾಂಡವನಾಟ್ಯವನ್ನು ಡಮರುಗದ ಘನರವದಿಂದ ಪ್ರಾರಂಭಿಸುವನೆಂದು ನಮ್ಮಲ್ಲೊಂದು ಅಪೂರ್ವ ವರ್ಣನೆಯಿದೆ. ಅಂದರೆ ಶಬ್ದವು ಜೀವನದ ಆದಿ; ಚೈತನ್ಯದ ಕುರುಹು. ಶಾಂತಿಯೆಂಬುದು ಘೋಷರಹಿತತೆಗೆ ಬೇರೆಯ ಹೆಸರೇ ಹೊರತು ತಾನೇ ಒಂದು ಪ್ರತ್ಯೇಕ ಸ್ಥಿತಿಯಲ್ಲ. ಸಹಜ ವಾದ, ನಿಷ್ಕಪಟವಾದ ಚರಿತ್ರೆಯೇ ಅದರ ಹೆಗ್ಗುರುತಾಗಿರುವುದರಿಂದ ಬಾಲಕರ ಬದುಕು ಕೆಲವು ವಿಚಾರಗಳಲ್ಲಿ ಜೀವನದ ಸೂಕ್ಷ್ಮತತ್ವಗಳಿಗೆ ಬಹಳ ಹತ್ತಿರದಲ್ಲಿದೆ. ಆದ್ದರಿಂದಲೇ ಅವರು ನಾದಪ್ರಿಯರು. ಕಿರಿಚಿ, ಗಲಭೆ ಯೆಬ್ಬಿಸಿ, ಮನೆಯ ಹೆಂಚನ್ನು ಹಾರಿಸುವುದಕ್ಕೆ ಅಪೇಕ್ಷೆಯಿಲ್ಲದವನೂ, ಹೋಳಿಗೆಯನ್ನು ಮೆಲ್ಲುವುದಕ್ಕೆ ಇಷ್ಟವಿಲ್ಲದವನೂ, ಚಿಕ್ಕವನಾದರೂ ಹುಡುಗನೇ ಅಲ್ಲವೆಂದು ನಾವು ಸಾಧಿಸಬಹುದು; ಅವನು ಕೃತ್ರಿಮ ವಯಸ್ಸಿನ ಗೃಹಸ್ಥ! ನಮ್ಮ "ಸ್ಕೌಟ್" ಕ್ರಮವೆಂಬ ದೊಡ್ಡ ಆಟವು ಬಾಲಕರ ಮನೋಧರ್ಮವನ್ನನುಸರಿಸಿ ತನ್ನ ನಡೆ ನುಡಿ, ಕಾರ್ಯಕಟ್ಟಳೆ ಗಳನ್ನು ವಿಧಿಸಿದೆ. ಅದರ ಎಲ್ಲಾ ದರ್ಜೆಗಳಲ್ಲಿಯೂ ದಳದವರು ಆಗಾಗ್ಗೆ ಗುಂಪುಕಟ್ಟಿ ನಿಂತುಕೊಂಡು ಗಟ್ಟಿಯಾಗಿ ಅರ್ಭಟಿಸುವುದು ಒಂದು ಸಂಪ್ರ ದಾಯವಾಗಿದೆ. ಏನೂ ಅರಿಯದವರಿಗೆ, ದೋಷವನ್ನೇ ಬೆದಕಿ ದೂರುವ ಚಾಯಮಾನದವರಿಗೆ, ಅದು ಅರ್ಥವಿಲ್ಲದ ವಿಕೃತವಾದ ಬೊಬ್ಬೆಯೆಂದು ತೋರಬಹುದು. ಆದರೆ ಮರಿಗಳು ಮತ್ತು ಸ್ಕೌಟುಗಳು ಯಾವಾಗ ಬೇಕಾ ದರೂ ಆಗಲೀ, ಅಥವಾ ಮನಸ್ಸು ಬಂದಂತೆಯಾಗಲೀ, ಹಾಗೆ ಸದ್ದುಮಾಡ ಲಾಗುವುದಿಲ್ಲ. ಗಂಟಲಿನ ಸಾಹಸಕ್ಕೂ ಯುಕ್ತಕಾಲವಿದೆ; ನಿಯತ

ಮಾರ್ಗವಿದೆ. ಅದರಿಂದ ವಿಶೇಷ ಪ್ರಯೋಜನವುಂಟೆಂದು ಹಿರಿಯರ ಸದುಕ್ತಿಯಿಂದಲೂ ಸ್ವಂತ ಅನುಭವ, ಪರೀಕ್ಷೆಯಿಂದಲೂ ವ್ಯಕ್ತಪಟ್ಟಿದೆ.

ಮರಿಗಳಿಗೆ ಸ್ಫೋಟಗಳಿಗಿಂತಲೂ ಹೆಚ್ಚಾಗಿ ಸಪ್ಪಳಮಾಡಲೂ, ಕೂಗಲೂ ಅವಕಾಶವುಂಟು. ಮರಿಗಳ ವ್ಯಾಸಂಗವೆಲ್ಲವೂ ಸ್ವಲ್ಪ ಹೆಚ್ಚು ಕಡಿಮೆ ಅ—ಆ—ಕು—ಕೂ ಈ ನಾಲ್ಕರಲ್ಲಿ ಅಡಗಿದೆ: ಹಾಗೆಂದರೆ ಅಭಿನಯ—ಆಟ—ಕುಣಿತ—ಕೂಗಾಟ! ಅದು ಅವರ ಕಿರಿಯತನದ ಹಕ್ಕು. ಅವರದು ಬೆಳದಿಂಗಳಿನ ಬಾಳು; ಹರ್ಷಪೂರಿತವಾದ ಬಾಳು. ಮರಿಗಳ ಪ್ರತಿಯೊಂದು ನಾದವೂ ಈ ಅವ್ಯಾಜ, ಅಖಂಡ ಸಂತೋಷವನ್ನು ಪ್ರದರ್ಶಿಸುತ್ತಿರಬೇಕು. ನಾಚಿಕೆಯಿಂದಲೋ, ಸರಿಯಾದ ಪ್ರೇರೇಪಣೆಯಿಲ್ಲದೆಯೋ, ಕೇವಲ ನಿರ್ಬಂಧಕ್ಕೋಸ್ಕರಲೋ, ಎಸಗಿದ ಕೂಗು ಗಿಣಿಯ ಪಾಟದಂತೆ ನೀರಸ, ಅಸಮರ್ಪಕ, ಅಸಹನೀಯ.

ಮರಿಗಳ ನಾದವು ಸರಳವಾದದ್ದೂ, ಸುಲಭವಾದದ್ದೂ, ಅವರ ಬೆಳವಣಿಗೆಯ ಅವಧಿಗೆ ಸಮಂಜಸವಾದದ್ದೂ, ಆಗಿದ್ದರೆ ಚೆನ್ನಾಗಿ ಶೋಭಿಸುವುದು. ಉಚ್ಚ ಸಿದ್ಧಾಂತ, ಗಹನ ಜಿಜ್ಞಾಸೆ, ಮುಗಿಲನ್ನು ಮುಟ್ಟುವ ಹೆಬ್ಬಯಕೆ, ಆಡಂಬರದ ಪ್ರತಿಜ್ಞೆ, ಉಚ್ಚರಿಸುವಾಗ ಹಲ್ಲು ಮುರಿಯುವ ತೊಡಕು ಭಾಷೆ—ಇವು ಸರಿಯಲ್ಲ. ಮತ್ತು ಪರದೇಶದ ವಿಜಾತೀಯ ನಾದಗಳು ನಮ್ಮ ಮಕ್ಕಳಿಗೆ ಪ್ರಶಸ್ತವಾಗಿ ಹೊಂದುತ್ತವೆಯೋ ಇಲ್ಲವೋ ಖಂಡಿತವಾಗಿ ಹೇಳಲಾಗದು. ಅಂತೂ ಅವನ್ನು ಅಲ್ಪವಾಗಿಯೂ, ಎಚ್ಚರಿಕೆಯಿಂದಲೂ ಬಳಸಿಕೊಳ್ಳಬೇಕು. ಪಶುಪಕ್ಷಿಗಳ ವಿವಿಧ ಸಂಭಾಷಣೆ, ಯಂತ್ರಗಳ ಚಲನ ಚೀತ್ಕಾರ, ಪ್ರಕೃತಿದೇವಿಯ ಉನ್ನತ ರಭಸ—ಇವೇ ಮೊದಲಾದ ಧ್ವನಿಗಳ ಪಾಳೆಯಪಟ್ಟನ್ನು ನಮ್ಮ ಮರಿಗಳು ಕೊಳ್ಳೆ ಹೊಡೆಯಬಹುದು. ಆದರೆ ಯಾವ ಕಾರಣದಿಂದಲೋ ಆ ಪ್ರಯತ್ನವು ಅಷ್ಟು ವಿಪುಲವಾಗಿ ಕಾಣಬರುವುದಿಲ್ಲ. ಮಕ್ಕಳು "ಸಾ—ಧಿ—ಪೇ—ವು" ಅನ್ನುವುದಕ್ಕಿಂತಲೂ ಗುಬ್ಬಚ್ಚಿಯಂತೆ ಚಿಲಿಪಿಲಿಗುಟ್ಟಿದರೆ, ಕುದುರೆಯಂತೆ ಕೆನೆದರೆ, ನಮ್ಮ ಕಿವಿಗೆ ಎಷ್ಟೋ ಹಿತ.

ನಾದದ ತಾತ್ಪರ್ಯವನ್ನೂ, ಉದ್ದೇಶವನ್ನೂ, ಮರಿಗಳು ತಕ್ಕ ಮಟ್ಟಿಗೆ ತಿಳಿದುಕೊಂಡಿರುವುದು ಸಾಮಾನ್ಯವಾಗಿ ಒಳ್ಳೆಯದು. ಆದರೆ ಅಷ್ಟೇ ಸಾಲದು. ಸಂಪೂರ್ಣವಾಗಿ ಅರ್ಥವಾಗದೆ, ಸಂಗೀತದಂತೆ ಶಬ್ದಗಳ ಜೋಡಣೆಯಿಂದಲೇ ವಿಸ್ಮಯದಿಂದ ಕೂಡಿದ ಅಸುರಾಗವನ್ನು ಹುಟ್ಟಿಸುವ ಕೆಲವು ನಾದಗಳನ್ನು ಪ್ರತಿಯೊಂದು ಮರಿಗಳ ಗುಂಪೂ ಅಭ್ಯಾಸ ಮಾಡುವುದು ಅಗತ್ಯ. ಬಾಲಕರಿಗೆ ವಿಚಿತ್ರ ದೃಶ್ಯ, ವಿಚಿತ್ರ ಶ್ರವಣಗಳಲ್ಲಿ ಅತಿಶಯ ಆಸಕ್ತಿಯಿರುವುದರಿಂದ, ಅಲ್ಲದೆ ಇತರ ನಡೆವಳಿಕೆಗಳಿಂದ ಅವರ ಮನಸ್ಸು, ಶರೀರಗಳು ಹೇಗೋ ಹಾಗೆ ಈ ವಿಧವಾದ, ಕೈಗೆ ಪೂರ್ತಿ ಸಿಲುಕದ, ನಾದಗಳಿಂದ ಅವರ ಹೃದಯವು ವಿಕಾಸ ಹೊಂದುವುದು.

ಒಟ್ಟಿನಲ್ಲಿ, ಮರಿಗಳ ಹರ್ಷನಾದವು ಸಾರವತ್ತಾದ, ಸ್ವಾರಸ್ಯಕರವಾದ ಒಂದು ಆಚರಣೆ. ಹುಡುಗರು ಕುಗ್ಗದ ಉತ್ಸಾಹದಿಂದ ಅದನ್ನು ಪುನಃಪುನಃ ಕೈಗೊಳ್ಳಲು ಸಿದ್ಧರಾಗಿರಬೇಕು. ಅವರು ಹಾಗಿರಲು ಗುಂಪಿನ ರೀತಿನೀತಿಗಳನ್ನು ಸೂಕ್ತ ಮರ್ಯಾದೆಯಲ್ಲಿ ಇಟ್ಟುಕೊಳ್ಳಬಲ್ಲ " ಆಕೇಲ " ನೊಬ್ಬನು ಅತ್ಯವಶ್ಯಕ.

---

# ಹರ್ಷನಾದಗಳು

# ಹರ್ಷನಾದಗಳು

—:0:—

**ಸೂಚನೆ.**

ಸಾಮಾನ್ಯವಾಗಿ ಈ ಹರ್ಷನಾದಗಳನ್ನು ಹೇಳುವಾಗಲೆಲ್ಲಾ ಗುಂಪಿನವರೂ, ದಳದವರೂ, ಚಕ್ರಾಕಾರವಾಗಿಯೋ, ಕುದುರೆಯ ಲಾಳದ ಆಕಾರವಾಗಿಯೋ ನಿಂತುಕೊಳ್ಳಬೇಕು. ನಾಯಕನು ಚಕ್ರಾಕಾರದಲ್ಲಿ ಚಕ್ರದ ಮಧ್ಯದಲ್ಲಿಯೂ, ಕುದುರೆಯ ಲಾಳದ ಆಕಾರದಲ್ಲಿ ಖಾಲಿ ಇರುವ ಜಾಗದಲ್ಲಿಯೂ ನಿಂತುಕೊಳ್ಳಬೇಕು. ಪ್ರಶ್ನೋತ್ತರ ರೂಪದಲ್ಲಿರುವ ನಾದಗಳಲ್ಲಿ ನಾಯಕನು ಪ್ರಶ್ನೆಯನ್ನು ಕೇಳಿದನಂತರ ಎಲ್ಲರೂ ಏಕಕಂಠದಿಂದ ಉತ್ತರವನ್ನು ಹೇಳಬೇಕು. ಇತರ ನಾದಗಳನ್ನು ಮಾಡುವಾಗ ಮೊದಲು ನಾಯಕನು ಹೇಳಿದಮೇಲೆ ಇತರರು ಹೇಳುವುದು ಉತ್ತಮ; ಇಲ್ಲದಿದ್ದರೆ ಸರಿಬರುವುದಿಲ್ಲವೆಂದು ಅನುಭವದಿಂದ ತಿಳಿದು ಬಂದಿದೆ.

ನಾಯಕನೆಂದರೆ ಪಂಗಡದ ಅಥವಾ ಗುಂಪಿನ ನಾಯಕನೇ ಆಗಬೇಕೆಂಬ ಯಾವ ನಿರ್ಬಂಧವೂ ಇಲ್ಲ. ನಾದಗಳಿಗಾಗಿಯೇ ಒಬ್ಬ ನಾಯಕನನ್ನೋ ಅಥವಾ ಒಂದೊಂದು ನಾದಕ್ಕೂ ಅದನ್ನು ಚೆನ್ನಾಗಿ ಹೇಳುವ ಒಬ್ಬೊಬ್ಬ ನಾಯಕನನ್ನೋ ಚುನಾಯಿಸಬಹುದು. ಒಬ್ಬನೇ ಇರಬೇಕೆಂಬ ಕಟ್ಟೋ ಇಲ್ಲ. ಎಷ್ಟೋ ಸಂದರ್ಭಗಳಲ್ಲಿ ಇಬ್ಬರಿದ್ದರೇ ಚೆನ್ನ.

ಕೆಲವು ನಾದಗಳಲ್ಲಿ ಸ್ವರವ್ಯತ್ಯಾಸಗಳನ್ನು ಅಕ್ಷರಗಳ ಗಾತ್ರ ವ್ಯತ್ಯಾಸಗಳಿಂದ ತೋರಿಸಿದೆ.

ನಾದಗಳನ್ನು ಹೀಗೆಯೇ ಮಾಡಬೇಕು ಹಾಗೆಯೇ ಮಾಡಬೇಕು ಎಂದು ಬರೆದು ತಿಳಿಸುವುದು ಸಾಧ್ಯವಲ್ಲ. ಆದುದರಿಂದ ಅದನ್ನು ಹಿರಿಯಣ್ಣಂದಿರ ಬುದ್ಧಿಕುಶಲತೆಗೇ ಬಿಟ್ಟಿದೆ. ಒಟ್ಟಿನಲ್ಲಿ ಹಿರಿಯಣ್ಣಂದಿರು ಹುಡುಗರಿಗೆ ಕಲಿಸುವಾಗ ಸ್ವರವ್ಯತ್ಯಾಸಗಳನ್ನೂ, ಅಂಗಚೇಷ್ಟೆಗಳನ್ನೂ ಸರಿಯಾಗಿ ಮಾಡುವಂತೆ ನೋಡಿಕೊಳ್ಳಬೇಕು.

---

## ೧. ಸ್ವಾಗತಂ

ನಾಯಕ—ಬಂದಿಹರಿಲ್ಲಿಗೆ ಬಂಧುಗಳೊಬ್ಬರು,
ಏನೆನ್ನುವಿರೈ ಮರಿಗಳಿರ?

ಮರಿಗಳು—ಸ್ವಾಗತಂ! ಸ್ವಾಗತಂ!! ಸುಸ್ವಾಗತಂ!!!

ನಾಯಕ—ಸ್ವಾಮೀ, ಸ್ವಾಗತ ಬಯಸುವರೀಜನ,
ತವಸ್ವಾಗಮನಕೆ ಲಾಲಿಪುದು.

ಮರಿಗಳು—**ಸ್ವಾಗತಂ! ಸ್ವಾಗತಂ!! ಸುಸ್ವಾಗತಂ!!!**

ನಾಯಕ—ಕಿರಿಯರೆ ನಿಮ್ಮನು ಹರಸಲು, ಹರುಷವ
ಗೊಳಿಸಲು ಬಂದಿಹರಿವರೀಗ.

ಮರಿಗಳು—**ಸ್ವಾಗತಂ! ಸ್ವಾಗತಂ!! ಸುಸ್ವಾಗತಂ!!!**

ಮು. ವೆಂಕಟಕೃಷ್ಣಪ್ಪ.

## ೨. ಜಬ್ ತಕ್

ಜಬ್ ತಕ್ | ಹಮ್ ಸಬ್ | ಮಿಲ್ಕೆ | ರಹೇಂ - | ಗೇ
ತಬ್ ತಕ್ | ಹಮ್ ಸಬ್ | ಘುಟ್ಟ್ | ರಹೇಂ - | ಗೇ ||
ಜಬ್ ತಕ್ | ಹಮ್ ಸಬ್ | ಸ್ಕೌಟ್ | ಚಲೀಂ - | ಗೇ
ತಬ್ ತಕ್ | ಹಮ್ ಸಬ್ | ಶರೀಫ್ | ರಹೇಂ - | ಗೇ ||

[ಅರ್ಥ—ಎಲ್ಲಿಯವರೆಗೆ ನಾವು ಸೇರಿರುತ್ತೇವೆಯೋ ಅಲ್ಲಿಯ ವರೆಗೂ ನಾವು ಘಟ್ಟಿಯಾಗಿರುತ್ತೇವೆ. ಎಲ್ಲಿಯವರೆಗೆ ನಾವು ಸ್ಕೌಟುಗಳಾಗಿ ನಡೆಯುತ್ತೇವೆಯೋ ಅಲ್ಲಿಯವರೆಗೂ ನಾವು ಯೋಗ್ಯರಾದವರಾಗಿರುತ್ತೇವೆ].

ವಿ. ಎಸ್. ರಾಮಚಂದ್ರರಾವ್.

## ೩. ಹರುಷವ - ಬೀರುತ

ನಾಯಕ :—ಹರುಷವ - ಬೀರುತ -

ಮರಿಗಳು : —ಓ - **ಡ್ಯಾ - ಡು.**

ನಾಯಕ :—ದಿನಕೊಂದು - ಉಪಕಾರ -

ಮರಿಗಳು :—**ನೀ - ಮಾ - ಡು.**

ಎಲ್ಲರೂ :—**ನಾಲ್ಮಡಿ ಕೃಷ್ಣನ**
**ಕೊಂ - ಡಾ - ಡು.**

'ಮೈಸೂರು ಮಕ್ಕಳು'

## ೪. ಸ್ವರ್ಗನಾಕ

ನಾಯಕ—ಸ್ವರ್ಗನಾಕ ! ಸ್ವರ್ಗನಾಕ !

ಮರಿಗಳು—ಹೊ ! ಹೊ ! ಹೋ ೯ !

ನಾಯಕ—ಭೂಮಿನಾಕ ! ಭೂಮಿನಾಕ !

ಮರಿಗಳು—ಭೊಂ ! ಭೊಂ ! ಭೋ ೯೦ !

ನಾಯಕ—ಸ್ವರ್ಗನಾಕ ! ಭೂಮಿನಾಕ !
ನೀವ್ ಯಾರ್‌ರೀ ?

ಮರಿಗಳು—ಮೈಸೂರ್ ಮರಿಗಳು,
ಕಾಣ್‌ರೇನ್‌ರೀ ?

**ಮು. ವೆಂಕಟಕೃಷ್ಣಪ್ಪ.**

## ೫. ವೀರರುನಾವ್

ನಾಯಕ—ವೀರರು ನಾವ್ -

ಮರಿಗಳು—**ವೀ ೯**

ನಾಯಕ—ಧೀರರು ನಾವ್ -

ಮರಿಗಳು—**ಧೀ ೯**

ನಾಯಕ—ಗಂಭೀರರು ನಾವ್ -

ಮರಿಗಳು—**ಭೀ ೯**

ಎಲ್ಲರೂ—**ಮೈಸೂರ್ ಸಿಂಹದ ಮರಿಗಳು ನಾವ್** -

**ವ್ಹಾ ೩ ೩ !**

ವಿ. ಎಸ್. ರಾಮಚಂದ್ರರಾವ್.

## ೬. ಅಡಿ

ನಾಯಕ— ಮುಂದಕೆ ಅಡಿಯಿಡು !

ಮರಿಗಳು— ಅದೆ ಸ್ವರ್ಗ !

ನಾಯಕ— ಹಿಂದಕೆ ಅಡಿಯಿಡು !

ಮರಿಗಳು— ಅದೆ ನರಕ !

ನಾಯಕ— ವೀರನು ಸಾಯನು !

ಮರಿಗಳು— ಚಿರಜೀವಿ !

ನಾಯಕ— ಹೇಡಿಯು ಸಾವನು !

ಮರಿಗಳು— ಶತಸಾರಿ !

ನಾಯಕ— ನಾಡಿನ ಸೇವೆಗೆ !

ಮರಿಗಳು— ನಮ್ಮಡಿಯು !

ಎಲ್ಲರೂ— ಇದಗೋ ಮುಂದಕೆ !
ಮುಂದಕ್ಕೆ !

ಮ. ವೆಂಕಟಕೃಷ್ಣಪ್ಪ.

## ೭. ಹೊಯ್ - ಸಳ

ನಾಯಕ—ಹಿಂಸೆಯ ಪಾಪದ ಪುಕ್ಕಲ ಹುಲಿಯು
ಮರಿಗಳು—**ಹೊಯ್ - ಸಳ ;**
ನಾಯಕ—ದಾಸ್ಯದ ರೋಗದ ಕೊಳಕಿನ ಹುಲಿಯು
ಮರಿಗಳು—**ಹೊಯ್ - ಸಳ ;**
ನಾಯಕ—ಸುಳ್ಳಿನ ಕೋಪದ ಚಾಡಿಯ ಹುಲಿಯು
ಮರಿಗಳು—**ಹೊಯ್ - ಸಳ ;**

ನಾಯಕ—ಭಾರತಮಾತೆಯ ಮಂಗಳ ಸೂತ್ರ
ಮರಿಗಳು—**ಹೊಯ್ - ಸಳ ;**
ನಾಯಕ—ಕನ್ನಡ ನಾಡಿನ ಜೀವದ ಉಸಿರೆ
ಮರಿಗಳು—**ಹೊಯ್ - ಸಳ ;**
ನಾಯಕ—ಹೊಯ್ಸಳರೆಲ್ಲರ ಕೀರ್ತಿಕಿರೀಟ
ಮರಿಗಳು—**ಹೊಯ್ - ಸಳ.**

ಮು. ವೆಂಕಟಕೃಷ್ಣಪ್ಪ.

## ೮. ಈ ನಮ್ಮ ಕೃಷ್ಣ

ನಾಯಕ—ಈ ನಮ್ಮ ಕೃಷ್ಣ,
ಮರಿಗಳು—ಶ್ರೀ.
ನಾಯಕ—**ಈ ನಮ್ಮ ಕೃಷ್ಣ,**
ಮರಿಗಳು—**ಶ್ರೀ.**
ನಾಯಕ—**ಈ ನಮ್ಮ ದೊರೆ,**
ಮರಿಗಳು—**ಶ್ರೀ ಶ.**

ನಾಯಕ—ಜಿ, ಸಿ, ಎಸ್, ಐ,
ಮರಿಗಳು—ಜಿ, ಬಿ, ಇ.
ನಾಯಕ—**ಜಿ, ಸಿ, ಎಸ್, ಐ,**
ಮರಿಗಳು—**ಜಿ, ಬಿ, ಇ.**
ನಾಯಕ—**ಜಿ, ಸಿ, ಎಸ್, ಐ,**
ಮರಿಗಳು—**ಜಿ, ಬಿ, ಇ.**
ಎಲ್ಲರೂ—**ಮಹಾರ್‍ರಾಜರ್ಗೆ ಜೈ !**

ಕೊಡಲಿ ನಾಗಾಜೋಯಿಸ್

## ೯. ರಾಗಿಮುದ್ದೆ

ರಾಗಿಮುದ್ದೆ, ರಾಗಿಮುದ್ದೆ ; ತಿಂದು ತಿಂದು, ತಿಂದು ತಿಂದು ;
ರಾಗಿಮುದ್ದೆ, ರಾಗಿಮುದ್ದೆ ; ತಿಂದು ತಿಂದು, ತಿಂದು ತಿಂದು ;

**ಘಟ್ಟಿಯಾಗಿ, ಘಟ್ಟಿಯಾಗಿ,**

**ಇ - ದ್ದೆ - ವ್ರು.**

ಈಗ ಈಗ, ಸಪ್ಪೆ ಅಕ್ಕಿ, ಅನ್ನ ತಿಂದು,
ಕ್ಷೀಣವಾಗಿ, ಹೀನವಾಗಿ
ಈ ೯ ೯ ೯ ೯ ೯
ಆದ್ರೆ !
ಸ್ಕೇಟಿಂಗ್ ಸೇರಿ, ಕಾಡಿಗ್ಹೋಗಿ, ಕಸರತ್ ಮಾಡಿ
ರ್‍ರು - ಸ್ತುಂ ;
**ಭಲ್ ಭಲ್ ಭಲ್**
**ರ್‍ರು - ಸ್ತುಂ ;**
**ಉಫೇ !**

ವಿ. ಎಸ್. ರಾಮಚಂದ್ರರಾವ್.

## ೧೦. ರಣರಂಗ

ನಾಯಕ—ಯುದ್ಧವಾಗುವುದು! ಯುದ್ಧವಾಗುವುದು!
ನಾಡನು ಕಾಯುವರಾರಯ್ಯಾ?
ಮರಿಗಳು—ಸಿದ್ಧರಾಗಿಹೆವು! ಸಿದ್ಧರಾಗಿಹೆವು!
ಮರಿಗಳು ನಾವಿಲ್ಲಿಹೆವಯ್ಯಾ!
ನಾಯಕ—ಫಿರಂಗಿ ಗುಂಡನು ಕಾರುವುದು!
ಮರಿಗಳು—ಕಾರಲಿ ಬೆದರದು ನಮ್ಮೆದೆಯು!
ನಾಯಕ—ಬಾಂಬಿನ ಮಳೆಯದು ಸುರಿಯುವುದು!
ಮರಿಗಳು—ಸುರಿಯಲಿ ತಗ್ಗದು ನಮ್ಮ ಬಲ!
ನಾಯಕ—ವಿಷವಾಯುವು ತಾ ಸುಡುವುದದು!
ಮರಿಗಳು—ಸುಡಲೈ ಸೀಯದು ನಮ್ಮ ಛಲ!
ನಾಯಕ—ಕತ್ತಿಯು ಮೊನೆಗಳು ಚುಚ್ಚುವುವು!
ಮರಿಗಳು—ಚುಚ್ಚಲಿ ಜಗ್ಗದು ನಮ್ಮ ದಳ!
ನಾಯಕ—ಮರಿಗಳು ನೀವು ಕೊಲ್ಲುವರು!
ಮರಿಗಳು—ಕೊಂದರೆ ಕೊಲ್ಲಲಿ ಸಾಯುವರಾರೈ?
ನಾಯಕ—ನಾಡನು ಕಾಯುವರಾರಯ್ಯಾ?
ಮರಿಗಳು—ಮರಿಗಳು ಮರಿಗಳು ನಾವಯ್ಯಾ!

ಮು. ವೆಂಕಟಕೃಷ್ಣಪ್ಪ.

## ೧೧. ಪ್ರಾಣಿಗಳ ಕೂಗು

ನಾಯಕ—ಟ್ರೊಯ್! ಟ್ರೊಯ್! ಟ್ರೊಯ್! ಅದ್ಯಾವ ಪ್ರಾಣಿಯೈ?
ಮರಿಗಳು—ರೊಚ್ಚೆಯಲ್ಲಿ ತಿರುಗಾಡಿ, ಅಚ್ಚಕಪ್ಪೆ ಶಬ್ದಮಾಡಿ,
**ಟ್ರೊಯ್! ಟ್ರೊಯ್! ಟ್ರೊಯ್! ಅದೊಂದು ಕಪ್ಪೆಸ್ಸೈ.**

ನಾಯಕ—ಲೊಚ್ ! ಲೊಚ್ ! ಲೊಚ್ ! ಅದ್ಯಾವ ಪ್ರಾಣಿಯ್ಯೆ ?
ಮರಿಗಳು—ಸೊಣ ತಿನ್ನಲ್ ತಿರುಗಾಡಿ, ಸಣ್ಣ ಹಲ್ಲಿ ಶಬ್ದ ಮಾಡಿ,
**ಲೊಚ್ ! ಲೊಚ್ ! ಲೊಚ್ !** ಅದೊಂದು ಹಲ್ಲಿ ಸೈ.

ನಾಯಕ—ಕಾ ! ಕಾ ! ಕಾ ! ಅದ್ಯಾವ ಪ್ರಾಣಿಯ್ಯೆ ?
ಮರಿಗಳು—ಮರದಲ್ಲಿ ಹಾರಿಯಾಡಿ, ಕಾಗೆ ತಾಯಿ ಶಬ್ದ ಮಾಡಿ,
**ಕಾ ! ಕಾ ! ಕಾ !** ಅದೊಂದು ಕಾಗೆಸೈ.

ನಾಯಕ—ಕೊ ! ಕೋ ! ಕೋ ೯ ! ಅದ್ಯಾವಪ್ರಾಣಿಯ್ಯೆ ?
ಮರಿಗಳು—ಕಾಲು ಕಡ್ಡಿ ಹುಡುಕ್ಯಾಡಿ, ಕೋಳಿತಾಯಿ ಶಬ್ದ ಮಾಡಿ,
**ಕೊ ! ಕೋ ! ಕೋ ೯ !** ಅದೊಂದು ಕೋಳಿ ಸೈ.

ನಾಯಕ—ಬೌವ್ ! ಒವ್ ! ಒವ್ !ಅದ್ಯಾವ ಪ್ರಾಣಿಯ್ಯೆ ?
ಮರಿಗಳು—ಕೇರಿಯಲ್ಲಿ ತಿರುಗಾಡಿ, ಊರನಾಯಿ ಶಬ್ದ ಮಾಡಿ,
**ಬೌವ್ ! ಒವ್ ! ಒವ್ !** ಅದೊಂದು ನಾಯಿಸೈ.

ನಾಯಕ—ಮ್ಯಾವ್ ! ಮ್ಯಾವ್ ! ಮ್ಯಾವ್ ! ಅದ್ಯಾವಪ್ರಾಣಿಯ್ಯೆ ?
ಮರಿಗಳು—ಹಾಲಸೆಲ್ಲ ಕುಡಿದೋಡಿ, ಚೀಲಿ ಬೆಕ್ಕುಶಬ್ದ ಮಾಡಿ,
**ಮ್ಯಾವ್ ! ಮ್ಯಾವ್ ! ಮ್ಯಾವ್ !** ಅದೊಂದು ಬೆಕ್ಕುಸೈ.

ಜಿ. ನಾರಾಯಣರಾವ್.

## ೧೨. ಮಗುವಿನ ಕೂಗು

ನಾಯಕ—**ಹೈ** ಯೆಂಬೋದೂ
ಮರಿಗಳು—ಕುದುರೇ ಕಂಡು
ನಾಯಕ—**ಕೂ** ಯೆಂಬೋದೂ
ಮರಿಗಳು—ಕುನ್ನಿಯು ಕಂಡು

ನಾಯಕ—ಮೂ ವೆಂಬೋದೂ
ಮರಿಗಳು—ಸೀಬಿಯ ಕಂಡು
ನಾಯಕ—ತಾ ಯೆಂಬೋದೂ
ಮರಿಗಳು—ತಿಂಡೀ ಕಂಡು
ನಾಯಕ—ಏ ಯೆಂಬೋದೂ
ಮರಿಗಳು—ಸಿಟ್ಟಿನ ಕೂಗು
ನಾಯಕ—ಊ ಯೆಂಬೋದೂ
ಮರಿಗಳು—ಆಳು ಬಂದಾಗ
ನಾಯಕ—ಆ ಯೆಂಬೋದೂ
ಮರಿಗಳು—ತಾಂಬೂಲಕ್ಕೆ
ನಾಯಕ—ಸಾ ಯೆಂಬೋದೂ
ಮರಿಗಳು—ಸಂಗೀತಕ್ಕೆ
ಎಲ್ಲರೂ—ಇವು ಕೇಳೆಲ್ಲವು
ಮಗುವಿನ
ಕೂಗು.

ಶ್ರೀ ಹೊಯ್ಸಳ.

## ೧೩. ಮೈಸೂರ್ನಾಡು

ನಾಯಕ—ಮೈಸೂರ್ ನಾಡಿದು
ಮರಿಗಳು—ಮಾದರಿ ನಾಡು
ನಾಯಕ—ಚಿನ್ನದ ನಾಡಿದು
ಮರಿಗಳು—ಕನ್ನಡ ನಾಡು
ನಾಯಕ—ಸೊಬಗಿನ ನಾಡಿದು
ಮರಿಗಳು—ಸೌಖ್ಯದ ಬೀಡು
ಎಲ್ಲರೂ—ನಾಲ್ವಡಿ ಕೃಷ್ಣನ ಮೇಲ್ಮೆಯನಾಡು.

ನಾಯಕ—ಗಂಧದ ಬಸವಿದು
ಮರಿಗಳು—ಅಂದದ ನಾಡು
ನಾಯಕ—ಶಿಲ್ಪಿಯ ಚತುರತೆ
ಮರಿಗಳು—ಕಲ್ಪಿಪನಾಡು
ನಾಯಕ—ಸಕಲ ಧರ್ಮಗಳ
ಮರಿಗಳು—ಸಾರುವ ನಾಡು
ಎಲ್ಲರೂ—**ನಾಲ್ವಡಿ ಕೃಷ್ಣನ ನಮ್ಮಾನಾಡು.**

ನಾಯಕ—ಕರುಣದಿ ಪೊರೆಯುವ
ಮರಿಗಳು—ವರ ಶ್ರೀಕೃಷ್ಣನ
ನಾಯಕ—ಪರಮ ಪವಿತ್ರವೀ
ಮರಿಗಳು—ಮೈಸೂರು
ನಾಯಕ—ಧರೆಯೊಳು ಮೆರೆಯುವೀ
ಮರಿಗಳು—ಮೈಸೂರು
ಎಲ್ಲರೂ—**ಮಾದರಿ ಮೈಸೂರು ಹೆಮ್ಮೆಯನಾಡು.**

ಕೆ. ಪಟ್ಟಾಭಿರಾಮಯ್ಯ.

## ೧೪. ಮೈಸೂರು ಮಕ್ಕಳು

ನಾಯಕ—ನಿಮ್ಮ ನಾಡಾವುದು ?
ಮರಿಗಳು—**ಮೈ - ಸೂ - ರು.**
ನಾಯಕ—ನಿಮ್ಮೂರದಾವುದು ?
ಮರಿಗಳು—**ಮೈ - ಸೂ - ರು.**
ನಾಯಕ—ಕನ್ನಡಿಗನ ಕಣ್ಣದು ?
ಮರಿಗಳು—**ಮೈ - ಸೂ - ರು.**

ಎಲ್ಲರೂ—**ನಾಲುವಡಿ ಕೃಷ್ಣನ,**
**ಮೈ - ಸೂ - ರು.**

ನಾಯಕ—ಚಿನ್ನದ ನಾಡದು,
ಮರಿಗಳು—**ಮೈ - ಸೂ - ರು.**
ನಾಯಕ—ಗಂಧದ ಗುಡಿಯದು,
ಮರಿಗಳು—**ಮೈ - ಸೂ - ರು.**
ನಾಯಕ—ವೀಣೆಯ ಬೆಡಗದು,
ಮರಿಗಳು—**ಮೈ - ಸೂ - ರು.**
ಎಲ್ಲರೂ—**ನಾಲುವಡಿ ಕೃಷ್ಣನ,**
**ಮೈ - ಸೂ - ರು.**

ನಾಯಕ—ಬೆಳೆಯುವ ನಾಡದು,
ಮರಿಗಳು—**ಮೈ - ಸೂ - ರು.**
ನಾಯಕ—ಇಳೆಯ ಮಾದರಿಯದು,
ಮರಿಗಳು—**ಮೈ - ಸೂ - ರು.**
ನಾಯಕ—ಕನ್ನಡಿಗ ನುಸಿರದು,
ಮರಿಗಳು—**ಮೈ - ಸೂ - ರು.**
ಎಲ್ಲರೂ—**ನಾಲುವಡಿ ಕೃಷ್ಣನ,**
**ಮೈ - ಸೂ - ರು.**

ಶ್ರೀ.

## ೧೫. ಸಂಜೆಯಾಯಿತು

ತಿರುಗಿ ತಿರುಗಿ ಸೋತುಹೋಗಿ
ಕರಗಿ ಕರಗಿ ಬಿಸಿಲಿನೊಳಗೆ
ಮರುಗಿ ಮರುಗಿ ಮನೆಯ ಕಡೆಗೆ
ಹೊರಟು ಬರುವೆವು, **ಕಾ, ಕಾ, ಕಾ.**

ಕುಕ್ಕಿ ಕುಕ್ಕಿ ಕಾಳತಿಂದು
ಸೊಕ್ಕಿ ಸೊಕ್ಕಿ ಉದರತುಂಬಿ
ತಿಕ್ಕಿ ತಿಕ್ಕಿ ಗಾಳಿಯೊಳಗೆ
ಫಕ್ಕನೆಂದು ಬರುವೆವು, **ಪಿಚ್, ಪಿಚ್, ಪಿಚ್.**

ಮರದ ಮೇಲೆ ಕುಳಿತು ಕುಳಿತು
ಸರಸವಾಗಿ ಕೂಗಿ ಕೂಗಿ
ಮರುಕವನ್ನು ಬೇರೆ ಮಾಳ್ಪ
ನೆರವ ಮುಗಿಸಿ ಬರುವೆವು, **ಕೂ, ಕೂ, ಕೂ.**

ಗಿಡದ ಎಲೆಯು ಹಾಗೆ ಹೀಗೆ
ಒಡಿಯುವಂತೆ ಮಾಡಿ ಮಾಡಿ
ಮಡದಿಯಳನು ನೋಡಲಿಕ್ಕೆ
ಬಿಡದೆ ಬರುವೆ ನಿತ್ಯವು, **ಸರ್, ರ್, ರ್.**

ಇಳೆಯ ಜನರ ನೋಡಿ ನಕ್ಕು
ಇಳಿದು ಅರೊಳಾಡಿನೋಡಿ
ಕಳೆದು ಕಾಲವನ್ನು ಸುಖದ
ಗಳಿಸಿಕೊಂಡು ಬರುವೆನು, **ಮಿಣಕ್, ಮಿಣಕ್, ಮಿಣಕ್.**

ರಂಗ ಅಣ್ಣ ಅಪ್ಪ ಬಾರೊ
ಮಿಂಗಲಿಕ್ಕೆ ಮೊಮ್ಮು ಕೊಡುವೆ
ಎಂದು ತುತ್ತು ಹಿಡಿದು ಕರೆವ
ಅಂಗನೆಯರ ವಚನವು, **ಬಾ, ಬಾ, ಬಾ.**

'ಸೀನು'

## ೧೬. ಟಾಮ್—ಟಾಮ್

೧

ಭಾವೀ ಕಟ್ಟೆಯ ಬೀದಿಯಲಿ
ಈಶ್ವರ ದೇವರ ಗುಡಿಯಲ್ಲಿ
ಆರತಿ ಇಂದು, ಅಭಿಷೇಕವಿಂದು
ಭಕುತರೆ ಬನ್ನಿ
ಕಾಣಿಕೆ ತನ್ನಿ
ಹೇಳಲಿಲ್ಲ ಅಂದೀರಿ !
ಕೇಳಲಿಲ್ಲ ಅಂದೀರಿ !
**ಟಮ್ ಟಂ, ಟಮ್ ಟಂ, ಟಮ್ ಟಂ........**

೨

ಗೋವಿಂದಸ್ವಾಮಿ ಪೇಟೆಯಲಿ
ಶಿವಣ್ಣಶೆಟ್ಟಿ ಪಾಪರ್ ಎದ್ದ
ಮನೆ ಹರಾಜು, ಮಠ ಹರಾಜು
ಅಗ್ಗದ ಮಾಲು
ಸಿಕ್ಕಿದ ಲಾಭ
ಬೇಕಾದರೆ ಬನ್ನಿ !
ಸಾಕಾದರೆ ನಿಲ್ಲಿ !
**ಟಮ್ ಟಂ, ಟಮ್ ಟಂ, ಟಮ್ ಟಂ........**

೩

ಜೀವಣ್ಣಪ್ಪನ ಕೇರಿಯಲಿ
ಇಲಿಗಳ ಸಾವು, ಪ್ಲೇಗಿನ ಕಾಟ
ಬಿಟ್ಟರೆ ಸೌಖ್ಯ, ನಿಂತರೆ ನಷ್ಟ

ಗಡಿಯನು ಮೀರಿ
ಗುಡಿಯನು ಸೇರಿ
ತಿಳೀಲಿಲ್ಲ ಅಂದೀರಿ !
ಹೊಳೀಲಿಲ್ಲ ಅಂದೀರಿ !
**ಟಮ್‌ಟಂ, ಟಮ್‌ಟಂ, ಟಮ್‌ಟಂ**........

೪

ಮಕ್ಕಳ ಕಳ್ಳರು ಬಂದಿಹರಂತೆ
ಊರಿನ ಕೇರಿಯು ತುಂಬಿಹರಂತೆ
ಮಕ್ಕಳೆ ಜೋಕೆ, ಅಳುವುದು ಏಕೆ ?
ಅಮ್ಮನ ಕೇಳಿ
ಮನೆಗಳ ಲಾಡಿ
ಹೇಳಲಿಲ್ಲ ಅಂದೀರಿ !
ಕೇಳಲಿಲ್ಲ ಅಂದೀರಿ !
**ಟಮ್‌ಟಂ, ಟಮ್‌ಟಂ, ಟಮ್‌ಟಂ**........

೫

ಬಿಸಲಿನ ಹಣ್ಣನು ತಿನ್ನುತ ತಿರುಗುವೆ
ಮುಂದಾಗುವುದನು ಇಂದೇ ತೋರುವೆ
ನುಡಿದುದೆ ನುಡಿಯುವೆ ಕೂಗುವ ಬಂಡೆಗೆ
ತಿರಸ್ಕಾರ ಮಾಡದೆ
ಪುರಸ್ಕಾರಮಾಡಿ
ಮರತೆವು ಅಂದೀರಿ !
ಕೊರತೆಯ ಹೇಳೀರಿ !
**ಟಮ್‌ಟಂ, ಟಮ್‌ಟಂ, ಟಮ್‌ಟಂ**........

ಗೋಪಾಲ.

## ೧೭. ಜಯ ಘೋಷ

ನಾಯಕ—ಮಹಿಶೂರ - ನಾಡಿದೋ !
ಮರಿಗಳು—ಜೈ ! ಜೈ ! ಜೈ !
ನಾಯಕ—ಶ್ರೀಕೃಷ್ಣ - ಮಹಾರಾಜ !
ಮರಿಗಳು—ಜೈ ! ಜೈ ! ಜೈ !
ನಾಯಕ—ನರಸಿಂಹ - ಯುವರಾಜ !
ಮರಿಗಳು—ಜೈ ! ಜೈ ! ಜೈ !
ನಾಯುಕ—ಜಯಚಾಮ - ನರಸುಮಗ !
ಮರಿಗಳು—ಜೈ ! ಜೈ ! ಜೈ !
ನಾಯಕ—ನಾಡಿಂಗೆ - ನಾಯಕಗೆ ! ನಾಡಿನಾ - ಬಾಲರಿಗೆ!
ಮರಿಗಳು—ಜೈ ! ಜೈ ! ಜೈ !

ಮು. ವೆಂಕಟಕೃಷ್ಣಪ್ಪ.

## ೧೮. ಹೋಗಿಬನ್ನಿರಿ

ವೇಳೆಯಾಯಿತು, ವೇಳೆಯಾಯಿತು,
ಹೋಗಿ ಬನ್ನಿರಿ ಮಿತ್ರರೇ !
ಕಾಲವತಿ ಸುಖವಾಗಿ ಸಾಗಿತು,
ಹೋಗಿ ಬನ್ನಿರಿ ಮಿತ್ರರೇ !
ಒಳ್ಳೆ ಕನಸುಗಳೆಲ್ಲ ತುಂಬಲಿ,
ಹೋಗಿ ಬನ್ನಿರಿ ಮಿತ್ರರೇ !
**ಹೋಗಿಬನ್ನಿರಿ ಹೋಗಿಬನ್ನಿರಿ,**
**ಬೀಳ್ಕೊಡುವೆವೈ ಮಿತ್ರರೇ !**

ಮು. ವೆಂಕಟಕೃಷ್ಣಪ್ಪ.

## ೧೯. ಕಿಲಿವಾಚ್

ಕಿಲಿ ಕಿಲಿ, ಕಿಲಿ ಕಿಲಿ,
ವಾಚ್ ವಾಚ್, ವಾಚ್ ವಾಚ್,
ಕ್ವೈಯು ಕಿವ್ ಕವ್ ಕವ್ವ್,
ಹಾ ಾ- ಹ, ಚಲ್ಮಹ್ಹ, ಚಲ್ಮಹ್ಹ, ಪೋಲಿವಾಹ್ಹಮ.
ಹಾ ಾ- ಹ, ಚಲ್ಮಹ್ಹ, ಚಲ್ಮಹ್ಹ, ಪೋಲಿವಾಹ್ಹಮ.

ಸೂಚನೆ—ಗುಂಪಿನವರಲ್ಲಿ ಅರ್ಧಮಂದಿ ಮಾತ್ರ ಹಾಡನ್ನು ಹೇಳಬೇಕು. ಉಳಿದವರು ಶೃತಿಯಂತೆ "ಅಂ-ಪ, ಅಂ-ಪ, ಅಂ-ಪ........" ಎನ್ನುತ್ತಿರಬೇಕು.

## ೨೦. ಚಿಂಗ್ ಎಲಿಂಗ್

ಚಿಂಗ್ ಎಲಿಂಗ್, ಚಿಂಗ್ ಎಲಿಂಗ್
ಚಿಂಗ್, ಚಾಂಗ್, ಚೊಂಗ್
ಬೂಮೆರಾಂಗ್, ಬೂಮೆರಾಂಗ್
ಬಂಗ್ ಬಾಂಗ್ ಬೊಂಗ್
ಚಿಂಗ್ ಎಲಿಂಗ್, ಬೂಮೆರಾಂಗ್
ಸಿಂಗ್ ! ಪ್ಹೂಃ ! ಬಾಃ !
ವುಲ್ಫ್ ಕಬ್ಸ್ ! ವುಲ್ಫ್ ಕಬ್ಸ್ !
ರ್ಹಃ ! ರ್ಹಃ ! ರ್ಹಾ !

## ೨೧. ಭೂಮ್-ಅ-ಚಿಕ್ಕ

ಭೂಮ್ - ಅ - ಚಿಕ್ಕ **ಭೂಂ !**
ರಾಕ್ - ಅ - ಚಿಕ್ಕ **ಭೂಂ !**
ಭೂಮ್ - ಅ - ಚಿಕ್ಕ, ರಾಕ್ - ಅ - ಚಿಕ್ಕ
ಭೂಮ್ - ಅ - ಚಿಕ್ಕ **ಭೂಂ !**
**ಸಿಸ್ - ಬಮ್ - ಭ !**
ಲಯನ್ ಕಬ್ಸ್ ! ಲಯನ್ ಕಬ್ಸ್ !
ರ್ಹಃ ! ರ್ಹ ! ರ್ಹಾ !

## ೨೨. ಚಪ್ಪಾಳೆ

ಒಂದೇ ಶಬ್ದ ಬರುವಂತೆ ಎಲ್ಲರೂ ಒಟ್ಟಾಗಿ ಮೊದಲು ನಿಧಾನವಾಗಿ ' ಟಪ್ - ಟಪ್ '; ಸ್ವಲ್ಪ ತಡೆದು **' ಟಿಪ್ - ಟಿಪ್ - ಟಿಪ್ '**; ಇನ್ನು ಸ್ವಲ್ಪ ತಡೆದು **' ಟಿಪ್ - ಟಿಪ್ - ಟಿಪ್ - ಟಿಪ್ '**; ಈ ರೀತಿ ಚಪ್ಪಾಳೆಯನ್ನು ತಟ್ಟುತ್ತಾ, ಕ್ರಮವಾಗಿ ವೇಗವನ್ನು ಹೆಚ್ಚಿಸುತ್ತಾ ಬರಬೇಕು. ಎಲ್ಲರೂ ನಾಯಕನ ಕಡೆಯೇ ಗಮನವಿಟ್ಟು, ಸಂಕೇತ ಬರುತ್ತಲೇ ಕೈಗಳನ್ನು ಮೇಲಕ್ಕೆತ್ತಿ, ಒಂದೇಸಲ ಚಪ್ಪಾಳೆ ಹೊಡೆದು ಥಟ್ಟನೆ ನಿಲ್ಲಿಸಬೇಕು.

## ೨೩. ರಾಕ್ಷಸನ ಸೀನು

ಆಟಗಾರರೆಲ್ಲರೂ ವೃತ್ತಾಕಾರವಾಗಿ ನಿಂತು ಐದರಲ್ಲಿ ಸಂಖ್ಯೆಯನ್ನು ಎಣಿಸಬೇಕು. ಆಗ ಒಂದನೇ ಸಂಖ್ಯೆಯವರೆಲ್ಲರೂ **ಟಿಸ್ಶು** ; ಎರಡನೆಯವರು **ಆ-ಕ್ಷೀ** ; ಮೂರನೆಯವರು **ಹಷ್** ; ನಾಲ್ಕನೆಯವರು **ಹಷ್-ಚಟ್** ; ಐದನೆಯವರು **ಚಿಟೂ** ; ಅನ್ನುವಂತೆ, ಅಥವಾ ಒಬ್ಬೊಬ್ಬರು ಒಂದೊಂದು ಪ್ರಾಣಿಯ ಕೂಗನ್ನು ಕೂಗುವಂತೆ ಹೇಳಬೇಕು. ನಾಯಕನು ನಿಧಾನವಾಗಿ ಕೈಗಳನ್ನು ಮೇಲಕ್ಕೆ ಎತ್ತುತ್ತಾ ಹೋದ ಹಾಗೆಲ್ಲಾ ಆಟಗಾರರು (ಸೀನು ಬರುವಾಗ ಮಾಡುವ ಹಾಗೆ) ಉಸಿರನ್ನು ಎಳೆದುಕೊಳ್ಳಬೇಕು. ನಾಯಕನು ಕೈಗಳನ್ನು ಕೆಳಕ್ಕೆ ಬಿಟ್ಟ ಕೂಡಲೆ ಪ್ರತಿಯೊಬ್ಬರೂ ತಮ್ಮ ತಮ್ಮ ಧ್ವನಿಯನ್ನು ಗಟ್ಟಿಯಾಗಿ ಹೇಳಬೇಕು. ಉತ್ತರವು ಗೊತ್ತೇ ಇದೆ, **ರಾಕ್ಷಸನ-ಸೀನು.**

## ೨೪. ಫಿರಂಗಿ

ಆಟಗಾರರನ್ನು ಎರಡು ಭಾಗವಾಗಿ ವಿಂಗಡಿಸಬೇಕು.

ಮೊದಲು ಒಂದು ಭಾಗದವರು ಅಂಗೈಯನ್ನು ಬಾಯಿ ಮುಂದೆ ಹಿಡಿದು ಗುಂಡಗೆ ತಿರಿಗಿಸುತ್ತಾ 'ಸ್ ಸ್ ಸ್' ಎಂದು ಬುಸುಗುಟ್ಟುತ್ತಿರಬೇಕು.

ಇದೇ ಕಾಲದಲ್ಲಿಯೇ ಇನ್ನೊಂದು ಭಾಗದವರೂ ಹಾಗೆಯೇ ಮಾಡುತ್ತಾ ಸಿಳ್ಳು ಹಾಕಬೇಕು. ಈ ಸಿಳ್ಳಿನ ಧ್ವನಿಯು ಮೊದಲು ಜೋರಾಗಿದ್ದು ಬರಬರುತ್ತಾ ಮೆತ್ತಗಾಗಬೇಕು. ತೀರ ಮೆತ್ತಗಾಗುತ್ತಲೆ ಎಲ್ಲರೂ ಘಟ್ಟಿಯಾಗಿ '**ಭೂಂ** !' ಎನ್ನಬೇಕು.

ಮತ್ತೆ ಮೊದಲಿನಿಂದ ಶಬ್ದಮಾಡಿ, ಈ ಸಾರಿ ಎರಡುಸಲ '**ಭೂಂ-ಭೂಂ** !!' ಎನ್ನಬೇಕು. ಪುನಃ ಮೊದಲಿನಿಂದ ಶಬ್ದಮಾಡಿ, ಮೂರುಸಲ '**ಭೂಂ - ಭೂಂ - ಭೂಂ** !!!' ಎನ್ನಬೇಕು.

## ೨೫. ಆಕಾಶ ಬಾಣ

ಆಟಗಾರರೆಲ್ಲರೂ ಮೊದಲು ಕೈಯಲ್ಲಿ ಬಾಣವನ್ನು ಹಿಡಿದು ನೆಲದಿಂದ ಮೇಲಕ್ಕೆ ನೆಗೆಯಲು ಸಿದ್ಧವಾಗಿರುವಂತೆ ಬಗ್ಗಿ ಬಲಗೈಯಿಂದ ನೆಲವನ್ನು ಮುಟ್ಟಿರಬೇಕು.

ಸಂಕೇತವು ಹೊರಡುತ್ತಲೇ, ಬಾಣವು ಮೇಲಕ್ಕೆ ಹೋಗುವುದನ್ನು ತೋರಿಸಲು ಎಳೆದೆಳೆದು 'ಸುಯ್' ಅಥವಾ 'ಸ್-ಸ್-ಸ್' ಎನ್ನುತ್ತಾ ಕೈಯನ್ನು ನಿಧಾನವಾಗಿ ತಲೆಯ ಮೇಲಕ್ಕೆ ತರಬೇಕು. (ಬಾಣವು ಮೇಲಕ್ಕೆ ಹೋಗುತ್ತಿರುವಾಗ ಒಬ್ಬೊಬ್ಬರು ಸಿಳ್ಳು ಹಾಕಬಹುದು.)

ಬಳಿಕ ಎಲ್ಲರೂ ಒಂದೇ ಏಟಿಗೆ ಘಟ್ಟಿಯಾಗಿ ಚಪ್ಪಾಳೆತಟ್ಟಿ ಬಿರುಸು ಒಡೆಯುವುದನ್ನು ಅನುಕರಿಸಬೇಕು.

ಅಲ್ಲಿಂದ ತಾರಾಮಂಡಲಗಳು ಉದುರುವುದನ್ನು ಬೆರಳುಗಳನ್ನೂ ಕೈಗಳನ್ನೂ ಆಡಿಸುತ್ತಾ, ಮೆಲ್ಲಗೆ ಕೆಳಕ್ಕೆ ಇಳಿಸುತ್ತಾ ತೋರಿಸಬೇಕು.

ಆಗಲೇ ಜನರ ಆಶ್ಚರ್ಯವನ್ನು ತೋರಿಸಲು 'ಅಹ! **ಅಹಹಾ** !' ಎನ್ನಬೇಕು.

ಕೈಗಳನ್ನು ಕೆಳಕ್ಕೆ ಇಳಿಸಿದ ಕೂಡಲೇ, ತಮ್ಮ ತೊಡೆಗಳನ್ನು ಎರಡು ಕೈಗಳಿಂದಲೂ ಪಟಪಟನೆ ತಟ್ಟಿಕೊಳ್ಳಬೇಕು.

ಅನಂತರ ಉತ್ಸಾಹವನ್ನು ಸೂಚಿಸಲು '**ಉಘೇ** !' ಎಂದು ಮೇಲಕ್ಕೆ ಹಾರಬೇಕು.

**ಕೊನೆ.**

